# ಶಿಲ್ಪಕಲಾ ಆರಾಧಕರು

ಸಂಪಾದಕ : ಎನ್. ಮರಿಶಾಮಾಚಾರ್












ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ಶಿಲ್ಪಕಲಾ ಆರಾಧಕರು

(ವಿವಿಧ ಶಿಲ್ಪಿಗಳ ಸಂಕ್ಷಿಪ್ತ ಪರಿಚಯ)


ಸಂಪಾದಕ

ಎನ್. ಮರಿಶಾಮಾಚಾರ್






ಕರ್ನಾಟಕ ಶಿಲ್ಪಕಲಾ ಅಕಾಡೆಮಿ

ಮೇಲ್ಮನೆ, ಕನ್ನಡ ಭವನ, ಜೆ. ಸಿ. ರಸ್ತೆ

ಬೆಂಗಳೂರು - ೫೬೦ ೦೦೨

**SHILPAKALA ARADHAKARU** : Editor - N. Marishamachar, Published by - N. Marishamachar, Registrar, Karnataka Shilpakala Academy, Ist Floor, Kannada Bhavana, J. C. Road, Bangalore - 560 002.

ಸಂಪಾದಕ : ಎನ್. ಮರಿಶಾಮಾಚಾರ್

ಮೊದಲ ಮುದ್ರಣ : ೨೦೦೦

ಪುಟಗಳು : VIII + ೬೦

ಬೆಲೆ : ರೂ. ೨೦-೦೦

ಲಕ್ಷ್ಮಿ ಮುದ್ರಣಾಲಯ
LAKSHMI MUDRANALAYA
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೬೬೧೩೧೨೩, ೬೬೧೮೭೫೨

# ಅಧ್ಯಕ್ಷರ ಮಾತು

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು ಕರ್ನಾಟಕದ ಹದಿಮೂರು ಮಂದಿ ಶಿಲ್ಪಿಗಳ ಸಂಕ್ಷಿಪ್ತ ಪರಿಚಯವನ್ನೊಳಗೊಂಡ 'ಶಿಲ್ಪಕಲಾ ಆರಾಧಕರು' ಕೃತಿಯನ್ನು ತಮ್ಮ ಮುಂದಿರಿಸಲು ನಮಗೆ ತುಂಬಾ ಸಂತೋಷವಾಗುತ್ತಿದೆ. ಈ ಪುಸ್ತಕದಲ್ಲಿ ಕೆಲವು ಶಿಲ್ಪಿಗಳು ಅತ್ಯಂತ ಹೆಸರು ಪಡೆದಿದ್ದರೂ, ಅವರ ಬಗ್ಗೆ ಸಾಕಷ್ಟು ಪ್ರಚಾರವಾಗಿಲ್ಲ ಮತ್ತು ಅದರಂತೆ ಕೆಲವು ಶಿಲ್ಪಿಗಳು ಅಜ್ಞಾತವಾಗಿಯೇ ಉಳಿದಿದ್ದಾರೆ. ಅಂತಹವರ ಪರಿಚಯವನ್ನು ಸಂಕ್ಷಿಪ್ತವಾಗಿ ಮಾಡಿಕೊಡಲಾಗಿದೆ. ಕೆಲವು ಶಿಲ್ಪಿಗಳ ಬಗ್ಗೆ ಸಾಕಷ್ಟು ಮಾಹಿತಿ ದೊರೆಯದ ಕಾರಣ, ಅವರು ಮಾಡಿರುವ ಸಾಧನೆಯನ್ನು ಗಮನಿಸಿ, ಅವರ ಬಗ್ಗೆ ಸಂಕ್ಷಿಪ್ತವಾಗಿ ಬರೆಯಲಾಗಿದೆ. ಈ ಶಿಲ್ಪಿಗಳ ಸಾಧನೆ ಸಿದ್ಧಿಗಳಿಗೆ ಮೆಚ್ಚಿ ತಲೆದೂಗಿ, ಅವರ ದುಃಖ ದುಮ್ಮಾನಗಳಲ್ಲಿ ನಾವು ಭಾಗಿಯಾಗಬೇಕಲ್ಲದೆ, ಅವರ ಪರಿಚಯವನ್ನು ಇಂದಿನ ಯುವ ಜನಾಂಗಕ್ಕೆ ಮಾಡಿಕೊಡಬೇಕಾಗಿದೆ.

'ಶಿಲ್ಪಕಲಾ ಆರಾಧಕರು' ಕೃತಿಯಲ್ಲಿ ಹದಿಮೂರು ಜನ ಶಿಲ್ಪಿಗಳ ಪರಿಚಯವಿದೆ, ಈ ಲೇಖನಗಳು ಕೇವಲ ಪರಿಚಯಾತ್ಮಕ ಲೇಖನಗಳೇ ಹೊರತು, ಶಿಲ್ಪಿಗಳು ರಚಿಸಿದ ಕೃತಿಗಳ ವಿಮರ್ಶೆಗಾಗಲಿ, ವಿವರಣೆಗಾಗಲಿ ಇಲ್ಲಿ ಅವಕಾಶವಿಲ್ಲ. ತನ್ನದೇ ಆದ ಕೆಲವೊಂದು ಸೀಮಿತ ಉದ್ದೇಶ ಈ ಲೇಖನಗಳಿಗಿವೆ ಎಂಬುದನ್ನು ಮರೆಯಬಾರದು. ಇವರ ಬಗ್ಗೆ ಲೇಖನಗಳನ್ನು ಬರೆದುಕೊಟ್ಟ ಲೇಖಕರಿಗೆ ಮತ್ತು ಮುದ್ರಿಸಿಕೊಟ್ಟ ಲಕ್ಷ್ಮಿ ಮುದ್ರಣಾಲಯದವರಿಗೆ ವಂದನೆಗಳು.

**ಸಿ. ಪರಮೇಶ್ವರಾಚಾರ್**
ಅಧ್ಯಕ್ಷರು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ಅನುಕ್ರಮಣಿಕೆ

# ಶಿಕಾರಿಪುರದ ತಿಪ್ಪಾಜಿಯವರು

**ಕೆ. ಜ್ಞಾನೇಶ್ವರ**

ಕರ್ನಾಟಕದ ಮಲೆನಾಡು ಅನೇಕ ಚಿತ್ರಶಿಲ್ಪ ಕಲಾವಿದರುಗಳಿಗೆ ಜನ್ಮ ನೀಡಿದೆ, ಇಲ್ಲಿಯ ಪ್ರಕೃತಿಯ ಸೊಬಗು, ಮರ ಗಿಡಗಳು, ಬೆಟ್ಟಗುಡ್ಡ, ನದಿ ತೊರೆಗಳು ನಿರಂತರ ಕಲಾವಿದರಿಗೆ ಸ್ಫೂರ್ತಿ ನೀಡಿದುದಲ್ಲದೆ, ಕಲಾವಿದನಿಗೆ ತನ್ನ ಪ್ರತಿಭೆ ಅರಳಲು ಬೇಕಾದ ಸಂಪನ್ಮೂಲಗಳನ್ನು ನೀಡಿ ಸುಪ್ತ ಪ್ರತಿಭೆಯನ್ನು ಅರಳಿಸಿ ಬೆಳೆಸಿತು. ಇವುಗಳನ್ನೆಲ್ಲಾ ಮೈಗೂಡಿಸಿಕೊಂಡು ಅರಳಿದ ಕಲಾಪ್ರತಿಭೆ ಶ್ರೇಷ್ಠ ಚಿತ್ರಶಿಲ್ಪಿ ಶಿಕಾರಿಪುರದ ತಿಪ್ಪಾಜಿಯವರು.

ಹಿಂದೆ ಕರ್ನಾಟಕದ ಸಾಂಪ್ರದಾಯಿಕ ಚಿತ್ರಕಲಾವಿದರೆಲ್ಲ ತಂಜಾವೂರಿನ ಚಿತ್ರಶೈಲಿಯನ್ನು ಅನುಕರಣೆ ಮಾಡುತ್ತಿದ್ದಾಗ, ಕರ್ನಾಟಕದಲ್ಲಿ ಈ ಮಣ್ಣಿನ ಜಾನಪದ ಸೊಗಡನ್ನು ತಮ್ಮ ಸಾಂಪ್ರದಾಯಿಕ ಚಿತ್ರಕಲೆಯಲ್ಲಿ, ತನ್ನದೇ ಆದ ವೈಶಿಷ್ಟವನ್ನು ತಂದು ಕೊಟ್ಟವರು ತಿಪ್ಪಾಜಿಯವರು.

ಪಾಶ್ಚಾತ್ಯ "ನೈಜಕಲೆ" ಕರ್ನಾಟಕದಲ್ಲಿ ಕಾಲಿಡುವ ಮುನ್ನ ಇಲ್ಲಿ ತನ್ನದೇ ಆದ ಸಾಂಪ್ರದಾಯಿಕ ಕಲೆ ಪ್ರಚಾರದಲ್ಲಿತ್ತು. ಆಗಿನ ಕಾಲದಲ್ಲಿ ಈಗಿನಂತೆ ಯಾವುದೇ ಕ್ಯಾಮರಾಗಳು ಇರಲಿಲ್ಲ. ಜನರು ತಮ್ಮ ತಂದೆ, ತಾಯಿ, ಪೂರ್ವಜರ ಚಿತ್ರಗಳನ್ನು ಚಿತ್ರಕಲಾವಿದರಿಂದ ಬರೆಸುವಾಗ ಅವರ ಮನಸ್ಸಿನಲ್ಲಿ ಬರೆಸಬೇಕಾದವರ ಹೋಲಿಕೆಯವರಿದ್ದರೆ ಅವರನ್ನು ಕೂರಿಸಿ ಇವರ ಹಾಗೆ ಇದ್ದರು ಎಂದು ಚಿತ್ರಕಾರರಿಗೆ ಹೇಳುತ್ತಿದ್ದರು. ಅವರು ಹಾಗೆಯೇ ನೋಡಿ ವಯಸ್ಸಿನ ವ್ಯತ್ಯಾಸಗಳನ್ನು ಸೂಕ್ಷ್ಮ ವಾಗಿ ಅಳವಡಿಸಿ ಬಿಡಿಸಿಕೊಡುತ್ತಿದ್ದರು ಮತ್ತು ಆ ಕಾಲಗಳಲ್ಲಿ ಮನೆಗಳಲ್ಲಿಟ್ಟು ಪೂಜಿಸುವ ದೇವತಾ ಫೋಟೊಗಳೆಂದರೆ, ಚಿತ್ರಕಲಾವಿದರು, ಕೈಯಿಂದಲೇ ಬಿಡಿಸಿದ ದೇವರ ಚಿತ್ರಪಟಗಳೇ ಇರುತ್ತಿದ್ದವೇ ಹೊರತು ಈಗಿನಂತೆ "ಆಫ್‌ಸೆಟ್" ಕ್ಯಾಲೆಂಡರ್‌ಗಳಿರಲಿಲ್ಲ. ಈ ತರಹದ ಸಾಂಪ್ರದಾಯಿಕ ಚಿತ್ರಪಟಗಳನ್ನು ಬಿಡಿಸುವುದರಲ್ಲಿ ಸಿದ್ಧಹಸ್ತರಾಗಿದ್ದವರೆಂದರೆ ತಿಪ್ಪಾಜಿಯವರು.



ಕರ್ನಾಟಕದ ಪ್ರಸಿದ್ಧ ಜಾತ್ರೆಯಲ್ಲಿ ಒಂದಾದ ಸಿರ್ಸಿಯ ಮಾರಿಕಾಂಬ ಜಾತ್ರೆಯ ಕೇಂದ್ರ ಬಿಂದುವಾದ ಜಗನ್ಮಾತೆ ಶ್ರೀ ಮಾರಿಕಾಂಬೆಯ ಮೂರ್ತಿಯನ್ನು ನೋಡಿ ಭಕ್ತಿಯಿಂದ ತಲೆ ಬಾಗಿಸದೆ ಇರುವವರಿಲ್ಲ, ಈ ಮೂರ್ತಿಗೆ ಹಿಂದೆ ಬಣ್ಣದ ಮೆರುಗನ್ನು ನೀಡುತ್ತಿದ್ದವರು ಖ್ಯಾತ ಚಿತ್ರಶಿಲ್ಪಿಗಳಾದ ಶಿಕಾರಿಪುರದ ತಿಪ್ಪಾಜಿಯವರು.

ತಿಪ್ಪಾಜಿಯವರು ನುರಿತ ಚಿತ್ರಕಾರರಷ್ಟೇ ಅಲ್ಲದೆ ಖ್ಯಾತ ಕಾಷ್ಠ ಶಿಲ್ಪಿಗಳೂ ಕೂಡ ಆಗಿದ್ದರು. ಇವರ ಕಾಷ್ಠ ಶಿಲ್ಪಗಳು, ಮಲೆನಾಡಿನ ಸುತ್ತಮುತ್ತ ಮೆರೆದಿದೆ. ಶಿಕಾರಿಪುರದ ಶ್ರೀ ಹುಚ್ಚರಾಯಸ್ವಾಮಿ ದೇವರ ಕಥೆ ಹಾಗೂ ಕೆಳದಿಯ ಶ್ರೀ ವೀರಭದ್ರಸ್ವಾಮಿ ದೇವರ ರಥ ಮತ್ತು ದೇವಸ್ಥಾನ ಒಳಾಂಗಣದ ಮೇಲ್ಛಾವಣಿಯಲ್ಲಿ ಕೆತ್ತಿದ ಸುಂದರಮರದ ಕೆತ್ತನೆಯ ಮೂರ್ತಿಗಳು ಇವರ ಕಲಾ ಪ್ರೌಢಿಮೆಗೆ ಸಾಕ್ಷಿಗಳಾಗಿವೆ. ತಿಪ್ಪಾಜಿಯವರ ಚಿತ್ರ ಕಲಾಪ್ರತಿಭೆಗೆ ಇನ್ನೊಂದು ಸಾಕ್ಷಿ ಇವರು ಚಿತ್ರಿಸಿದ ಸಾಂಪ್ರದಾಯಿಕ ಚಿತ್ರಪಟ "ವಿಶ್ವರೂಪ ದರ್ಶನ" ಈ ಚಿತ್ರಪಟವನ್ನು ಕರ್ನಾಟಕ ಸರ್ಕಾರದವರು ಸಾಂಪ್ರದಾಯಿಕ ಕಲೆಯ ಉನ್ನತ ಕಲಾಕೃತಿ ಎಂದು ಪರಿಗಣಿಸಿದ್ದಾರೆ.

ತಿಪ್ಪಾಜಿಯವರು ಹುಟ್ಟಿದ್ದು ಅನೇಕ ಪ್ರತಿಭಾವಂತ ಕಲಾವಿದರಿಗೆ ಜನ್ಮ ನೀಡಿದ ಶಿಕಾರಿಪುರದಲ್ಲಿ, ನಿಖರವಾದ ದಿನಾಂಕ ತಿಳಿದು ಬರದಿದ್ದರೂ ಇವರು ೧೮೬೦ರ ದಶಕದಲ್ಲಿ ಹುಟ್ಟಿರಬಹುದು ಎಂದು ಖಚಿತವಾಗಿ ಊಹಿಸಬಹುದು. ಇವರ ತಂದೆ ಖಂಡಪ್ಪನವರು ಇವರ ಪ್ರಾರಂಭಿಕ ಶಿಕ್ಷಣ ತಂದೆಯವರಲ್ಲೇ ನಡೆಯಿತು, ತಂದೆಯವರು ಶಿಕಾರಿಪುರದಲ್ಲಿ ಪ್ರಸಿದ್ಧ ಕಾಷ್ಠ ಶಿಲ್ಪಿಗಳಾಗಿದ್ದು ಮರ, ಕಂಚು, ಹಿತ್ತಾಳೆಗಳಲ್ಲಿ



ಮೂರ್ತಿಗಳನ್ನು ತಯಾರಿಸುತ್ತಿದ್ದರು. ಮಗ ತಿಪ್ಪಾಜಿ ಇವರಿಗೆ ಕೆಲಸದಲ್ಲಿ ಸಹಾಯ ಮಾಡುತ್ತಾ ಇವುಗಳಲ್ಲಿ ಪ್ರಾವಿಣ್ಯತೆಯನ್ನು ಪಡೆದ ನಂತರ ತಾನು ಈ ಕಲೆಯಲ್ಲಿ ಔನ್ಯತವಾದುದನ್ನು ಏನಾದರೂ ಸಾಧಿಸಲೇಬೇಕೆಂಬ ಹಟ ಬೆಳೆಯುತ್ತಾ ಬಂದಿತು. ಇದಕ್ಕಾಗಿ ಇದ್ದ ಊರಲ್ಲಿ ಇರದೆ ಆಗಿಂದಾಗ್ಗೆ ಬೇಲೂರು, ಹಳೇಬೀಡು ಮುಂತಾದ ಸ್ಥಳಗಳಿಗೆ ಹೋಗಿ ರೇಖಾ ಚಿತ್ರಗಳನ್ನು ರಚಿಸಿಕೊಂಡು ಬರುತ್ತಿದ್ದರು. ಎಲ್ಲೆಲ್ಲಿ ಶಿಲ್ಪಿಗಳು, ಕಲಾವಿದರು ಇರುವರೋ ಅಲ್ಲೆಲ್ಲಾ ಹೋಗಿ, ಅವರ ಸಾಧನ ಕ್ರಮ, ವಿಧಾನಗಳು ಗಮನಿಸಿ ಅನುಸರಿಸಿ ಅಭ್ಯಸಿಸುತ್ತಿದ್ದರು. ಮನ ಒಪ್ಪಿದರೆ ಕೆಲವು ಪ್ರತಿಷ್ಠಿತ ಶಿಲ್ಪಿಗಳಲ್ಲಿ ಸ್ವಲ್ಪಕಾಲ ಇದ್ದು ಅಭ್ಯಾಸ ಮಾಡುತ್ತಿದ್ದರು. ಹೀಗೆ ಅಭ್ಯಾಸಕ್ಕೆ ಬಂದ ವಿದ್ಯಾರ್ಥಿಗಳಿಗೆ ಆಗಿನ ಕಾಲದ ಶಿಲ್ಪಿಗಳು ವಿಚಿತ್ರ ಪರೀಕ್ಷೆಗಳನ್ನು ಒಡ್ಡುತ್ತಿದ್ದರು ಒಮ್ಮೆ ಪ್ರಸಿದ್ಧ ಚಿತ್ರಕಾರರೊಬ್ಬರಲ್ಲಿ ಶಿಷ್ಯವೃತ್ತಿಗೆ ಹೋದಾಗ ಕೆಲವು ಕಲ್ಲಿನ ಹರಳುಗಳನ್ನು ಅಂಗಳಕ್ಕೆ ಚೆಲ್ಲಿ ಇವುಗಳನ್ನು ಆಧಾರವಾಗಿ

ಚುಕ್ಕೆಗಳನ್ನಿಟ್ಟು ಒಂದು ಉತ್ತಮ ಚಿತ್ರ ರಚಿಸಿ ಎಂದು ಹೇಳಿದರು, ತಿಪ್ಪಾಜಿಯವರು ಇವರ ಕಟ್ಟಳೆಯನ್ನು ಅನುಸರಿಸಿ ಚಿತ್ರ ಬಿಡಿಸಿ ತೋರಿಸಿ ಮನ ಮೆಚ್ಚಿಸಿದರು, ನಂತರವೇ ಅವರು ತಮ್ಮಲ್ಲಿ ಇಟ್ಟುಕೊಂಡು ತಮಗೆ ತಿಳಿದಿರುವುದನ್ನು ಹೇಳಿಕೊಟ್ಟರು.

## ಮೈಸೂರಿಗೆ

ತಿಪ್ಪಾಜಿಯವರು ತಮ್ಮ ಜೀವಿತಕಾಲದಲ್ಲಿ ಅನೇಕ ಕಷ್ಟ ನಷ್ಟಗಳನ್ನು ಅನುಭವಿಸಿದವರು, ಕಿತ್ತು ತಿನ್ನುವ ಬಡತನ ತುಂಬು ಸಂಸಾರ ಜೀವನ ನಿರ್ವಹಣೆಯ ಮಧ್ಯೆ ಕಲಾರಾಧನೆ ಮುಂದುವರಿಸಿ ಏನಾದರೂ ಸಾಧಿಸಲೇಬೇಕೆಂಬ ಹಟ ಅವರನ್ನು ಆಗಾಗ್ಗೆ ಕಷ್ಟ, ಕಾರ್ಪಣ್ಯಗಳ ಪರೀಕ್ಷೆಗೆ ಗುರಿ ಮಾಡುತ್ತಿತ್ತು. ಒಮ್ಮೆ ಒಬ್ಬ ಶ್ರೀಮಂತರಲ್ಲಿ ಮಾಡಿದ ಸಾಲಕ್ಕಾಗಿ, ದಾಕ್ಷಿಣ್ಯಕೋಸ್ಕರ ತಮ್ಮಲ್ಲಿಯ ಅನೇಕ ಉನ್ನತ ಚಿತ್ರಕಲಾ ಕೃತಿಗಳನ್ನು ಕೊಟ್ಟುಬಿಟ್ಟರು. ಇಂದಿಗೂ ಶಿಕಾರಿಪುರ, ಶಿವಮೊಗ್ಗಗಳಲ್ಲಿ ಅವರ ಚಿತ್ರಪಟಗಳು ಕೆಲವು ಶ್ರೀಮಂತರ ಮನೆಗಳಲ್ಲಿ ಕಂಗೊಳಿಸುತ್ತಿವೆ. ನಂತರದ ದಿನಗಳಲ್ಲಿ ಸಾಧನಶೀಲರಾದ ತಿಪ್ಪಾಜಿಯವರಿಗೆ ಯಾರೋ ತಿಳಿದವರು ನಿಮ್ಮಲ್ಲಿರುವ ಕಲಾಪ್ರತಿಭೆಗೆ ತಕ್ಕ ಸ್ಥಳ, ಕಲಾವಿದರ, ಚಿತ್ರಶಿಲ್ಪಿಗಳ ನೆಲೆವೀಡಾದ ಮೈಸೂರು ಎಂದು ಹೇಳಿದರು. ತಿಪ್ಪಾಜಿಯವರು ತಮ್ಮ ಕಾರ್ಯಕ್ಷೇತ್ರವನ್ನು ಮೈಸೂರಿಗೆ ಬದಲಾಯಿಸಿದರು. ಅಲ್ಲಿ ಅವರಿಗೆ ರಾಜಾಶ್ರಯ ಕೂಡ ದೊರೆಯಿತು, ಇಲ್ಲಿ ಅವರು ಅನೇಕ ಚಿತ್ರಪಟಗಳನ್ನು ರಚಿಸಿದರು. ಇಂದಿಗೂ ಜಗನ್ಮೋಹನ ಅರಮನೆಯಲ್ಲಿರುವ 'ಕೃಷ್ಣಾರ್ಜುನ ಕಾಳಗ'ದ ಸಾಂಪ್ರದಾಯಿಕ ಚಿತ್ರಪಟ ಇವರ ಶ್ರೇಷ್ಠ ಕಲಾ ಪ್ರೌಢಿಮೆಗೆ ಸಾಕ್ಷಿಯಾಗಿದೆ. ಇವರ ಕಲಾಕೃತಿಗೆ ಅಂದಿನ ಸರಕಾರವು 'ಬಂಗಾರದ ಪದಕ' ನೀಡಿ ಗೌರವಿಸಿತ್ತು. ಅಂದಿನಿಂದ ಅವರು 'ಮೆಡಲ್ ಆರ್ಟಿಸ್ಟ್" ಎಂದೇ ಮೈಸೂರಿನಲ್ಲಿ ಪ್ರಸಿದ್ಧರಾಗಿದ್ದರು, ಇವರ ಕೆಲವು ಶ್ರೇಷ್ಠ ಕಲಾಕೃತಿಗಳು ಲಂಡನ್‌ನಲ್ಲಿರುವ ವಸ್ತುಸಂಗ್ರಹಾಲಯದಲ್ಲಿರುವುದೆಂದು ಅವರ ದಿನಚರಿ ಪುಸ್ತಕದಿಂದ ತಿಳಿದು ಬರುತ್ತದೆ. ಮೈಸೂರಿನಲ್ಲಿದ್ದ ಮಹಾರಾಜರ ಸುಟ್ಟು ಹೋದ ಹಳೆ ಅರಮನೆಯ ಅಲಂಕರಣವು ಇವರ ಚಿತ್ರಗಳಿಂದ ಕಂಗೊಳಿಸುತ್ತಿದ್ದವು ಎಂಬುದೂ ಸಹ ತಿಳಿದು ಬರುತ್ತದೆ. ಅದೂ ಅಲ್ಲದೆ ಮುಮ್ಮಡಿ ಕೃಷ್ಣರಾಜ ಒಡೆಯರವರಿಂದ ರಚಿತವಾದ "ಶ್ರೀ ತತ್ವನಿಧಿ" ಎಂಬ ಗ್ರಂಥಕ್ಕೆ ತಿಪ್ಪಾಜಿಯವರು ಕೆಲವು ಚಿತ್ರ ಬಿಡಿಸಿಕೊಟ್ಟಿದ್ದರೆಂದೂ ಸಹ ನಮಗೆ ತಿಳಿದುಬಂದಿರುವ ವಿಷಯ. ಅರಮನೆಯ ಕೆಲವು ಚಿತ್ರಶಿಲ್ಪ ಕಲಾವಿದರಲ್ಲಿ ತಮ್ಮೊಳಗೆ ಇದ್ದ ಮತ್ಸರ, ದ್ವೇಷ, ಅಸೂಯೆಗಳು ಇವರಿಗೆ ಸರಿ ಬೀಳದೆ ಪುನಃ ಹುಟ್ಟೂರಾದ ಶಿಕಾರಿಪುರಕ್ಕೆ ಬಂದರು. ಆಗ ಶಿಕಾರಿಪುರದ ಹುಚ್ಚರಾಯಸ್ವಾಮಿ (ಆಂಜನೇಯ) ದೇವಸ್ಥಾನದ ಕಮಿಟಿಯವರು ಸ್ವಾಮಿಗೆ ಹೊಸ ರಥ ಮಾಡಿಸುವ ಸಿದ್ಧತೆಯಲ್ಲಿದ್ದರು, ಈ ಅವಕಾಶವನ್ನು ಉಪಯೋಗಿಸಿಕೊಂಡು ತಿಪ್ಪಾಜಿಯವರು ತಮ್ಮ ಹುಟ್ಟೂರಲ್ಲಿ ಒಂದು ಶ್ರೇಷ್ಠ ರಥ ನಿರ್ಮಾಣ ಮಾಡಿದರು. ಇದರಲ್ಲಿರುವ ರಾಮಾಯಣ ಮತ್ತು ಕೃಷ್ಣಾವತಾರದ ದೃಶ್ಯಗಳು, ಅಷ್ಟದಿಕ್ಪಾಲಕರು ಮುಂತಾದವುಗಳು ಅವುಗಳ ಲಾಲಿತ್ಯ, ಶೈಲಿ ಹಾಗೂ ಕುಸರಿ ಕೆಲಗಳು ಇಂದಿಗೂ ಕಲಾರಸಿಕರ ಮನಸ್ಸನ್ನು ತಣಿಸದೆ ಬಿಡುವುದಿಲ್ಲ. ನಂತರ ಸಾಗರದ ಬಳಿಯ ಕೆಳದಿಗೂ ಹೋಗಿ ಅಲ್ಲಿಯ ವೀರಭದ್ರ ಸ್ವಾಮಿಗೂ ಒಂದು ರಥ, ದೇವಸ್ಥಾನದ ಒಳಾಂಗಣದಲ್ಲಿ ಮುಚ್ಚಿಣೆಯಲ್ಲಿರುವ ದೇವತಾ ಮೂರ್ತಿಗಳ ಕಾಷ್ಠ ಶಿಲ್ಪಿಗಳನ್ನು ನಿರ್ಮಿಸಿ ಕೊಟ್ಟು ಬಂದರು.

**ಕಲಾಕೃತಿಗಳು**

ತಿಪ್ಪಾಜಿಯವರು ಉನ್ನತ ಮಟ್ಟದ ಚಿತ್ರಕಲಾವಿದರಾಗಿದ್ದರು. ಪ್ರತಿಯೊಬ್ಬ ಶಿಲ್ಪಿಯೂ ಚಿತ್ರಕಲೆಯನ್ನು ಕರಗತ ಮಾಡಿಕೊಂಡು ರೂಢಿಸಿಕೊಳ್ಳಲೇಬೇಕು. ಆದರೆ ಚಿತ್ರಕಲೆಯಲ್ಲಿ ಸಾಧ್ಯ, ಸಾಧ್ಯತೆಯನ್ನು ಸಾಧಿಸಿ ತೋರಿಸಿದವರು ತುಂಬಾ ವಿರಳ. ತಿಪ್ಪಾಜಿಯವರ ಚಿತ್ರಪಟಗಳು ತುಂಬಾ ಸೂಕ್ಷ್ಮ ರೇಖಾ ವಿನ್ಯಾಸಗಳಿಂದ ಕೂಡಿವೆ ಹಾಗೂ ಆಕೃತಿಗಳಲ್ಲಿಯ ಲಾಸ್ಯ ಬಹಳ ಅಪರೂಪವಾಗಿದೆ. ಇದಕ್ಕೆ ಉಪಯೋಗಿಸಿರುವ ತಿಳಿಯಾದ ಬಣ್ಣ, ಸೂಕ್ಷ್ಮ ಛಾಯ ವಿನ್ಯಾಸ ಎಂಥವರ ಮನಸ್ಸನ್ನು ಸೂರೆಗೊಳ್ಳುತ್ತವೆ. "ವಿಶ್ವರೂಪ ದರ್ಶನ" ಇವರ ಒಂದು ಶ್ರೇಷ್ಠ ಕಲಾಕೃತಿ ೧೬"X೧೨"ನ ಅಳತೆಯ ಕಾಗದದ ಚಿತ್ರಪಟದಲ್ಲಿ ಭಗವಾನ್ ಶ್ರೀಕೃಷ್ಣನು ಅರ್ಜುನನಿಗೆ ತೋರಿದ ವಿಶ್ವರೂಪ ದರ್ಶನ ಇದು, ಎಲ್ಲಾ ದೇವಾನುದೇವತೆಗಳನ್ನು ಒಳಗೊಂಡಿದೆ. ಚಿತ್ರಪಟದ ಮಧ್ಯದಲ್ಲಿ ಶ್ರೀ ಕೃಷ್ಣನು ಅಷ್ಟಭುಜದಲ್ಲಿ ನಿಂತಿದ್ದಾನೆ. ಅವನ ಕಣ್ಗಳೇ ಸೂರ್ಯ ಚಂದ್ರರಾಗಿವೆ, ಭುಜದ ಮೇಲ್ಗಡೆ ದೇವತೆಗಳು, ಗಂಧರ್ವ, ಕಿನ್ನರ, ಕಿಂಪುರಷರು ಕಾಣಿಸುತ್ತಿದ್ದಾರೆ. ಹೃದಯ ಭಾಗದಲ್ಲಿ ಲಕ್ಷ್ಮೀ ನಾಭಿಯಲ್ಲಿ ಬ್ರಹ್ಮ, ಇಕ್ಕೆಲೆಗಳಲ್ಲಿ ಭೂಮಿಯ ಮೇಲಿರುವ ಬೆಟ್ಟ, ಗುಡ್ಡ, ಗಿಡಮರ, ಪ್ರಾಣಿಗಳು, ಜನರು, ಭೇಟಿಯಾಡುವವರು ರಾಜಾಧಿರಾಜರುಗಳು ಇದ್ದಾರೆ. ಕಾಲಬದಿಯ ಎರಡೂ ಕಡೆ ಪಾತಾಳದ ದೃಶ್ಯ, ಜಲಚರ ಜೀವಿಗಳು, ಜಲ ಕನ್ಯೆಯರು, ಸರ್ಪಗಳು, ಪಾದತಲದಲ್ಲಿ ವರಾಹ, ಆದಿಶೇಷರು ಗೋಚರಿಸುತ್ತಾರೆ. ಆತಂಕಗೂಂಡ ಅರ್ಜುನ ಧನುರ್ಬಾಣಗಳನ್ನು ಬಿಸಾಡಿ, ರಥದಿಂದಿಳಿದು ಕೃಷ್ಣನ ಎದುರು ಕೈ ಜೋಡಿಸಿ ಕುಳಿತಿದ್ದಾನೆ. ಚಿತ್ರಪಟದ ಸುತ್ತಲೂ ವಿಷ್ಣುವಿನ ದಶಾವತಾರ, ಅಷ್ಟದಿಕ್ಪಾಲಕರು ಕಂಗೊಳಿಸುತ್ತವೆ. ಇಷ್ಟೆಲ್ಲಾ ಒಳಗೊಂಡಿರುವ ಈ ಚಿತ್ರಪಟವನ್ನು ಕರ್ನಾಟಕದ ಸಾಂಪ್ರದಾಯಿಕ ಚಿತ್ರಕಲೆಯ ಒಂದು ಶ್ರೇಷ್ಠ ಕಲಾಕೃತಿ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಶ್ರೀ ಬಿ.ವಿ.ಕೆ. ಶಾಸ್ತ್ರಿಯವರು ಚಿತ್ರಕಲಾ ಪರಿಷತ್ತಿನವರು ಪ್ರಕಟಿಸಿರುವ "ದಿ ಟ್ರೆಡಿಷನಲ್ ಪೇಂಟಿಂಗ್ಸ್ ಆಫ್ ಕರ್ನಾಟಕ" ಎಂಬ ಪುಸ್ತಕದಲ್ಲಿ ಈ ಚಿತ್ರಪಟದ ಬಗ್ಗೆ ಬಹಳ ಸುಂದರವಾಗಿ ಹಾಗೂ ಮನೋಜ್ಞವಾಗಿ ಬರೆದಿದ್ದಾರೆ.

ತಿಪ್ಪಾಜಿಯವರ ಚಿತ್ರಗಳನ್ನು ಮೊದಲಬಾರಿಗೆ ಕರ್ನಾಟಕದ ಜನತೆಗೆ ಪರಿಚಯಿಸಿದವರು. ದಿ: ಎಸ್.ಎಸ್. ಕುಕ್ಕೆಯವರು, ಇವರು ಶಿವಮೊಗ್ಗೆಯ ಸಂಗ್ರಹಕಾರರ ಬಳಿಯಿದ್ದ ಚಿತ್ರಗಳನ್ನು ಬಹಳ ಕಷ್ಟ ಪಟ್ಟು ಮನವೊಲಿಸಿ ಬೆಂಗಳೂರಿಗೆ ತಂದು ಪ್ರದರ್ಶನವೊಂದರಲ್ಲಿ ಪ್ರದರ್ಶಿಸಿ, ಬೆಂಗಳೂರಿನ ಜನತೆ ನೋಡುವ ಭಾಗ್ಯ ಕರುಣಿಸಿದವರು. ನಂತರ ಈ ಚಿತ್ರಗಳು ಕರ್ನಾಟಕದ ವತಿಯಿಂದ ದೆಹಲಿಯಲ್ಲೂ ಪ್ರದರ್ಶನಗೊಂಡಿತು.

ದಿ : ಕುಕ್ಕೆಯವರು ತಿಪ್ಪಾಜಿಯವರ ಬಗ್ಗೆ ಯಾವಾಗಲೂ ಒಂದು ಮಾತು ಭಾವಪೂರ್ಣರಾಗಿ ಹೇಳುತ್ತಿದ್ದವರು. ಅದೆಂದರೆ "ಯಾವನಾದರೂ ಒಬ್ಬ ಕಲಾವಿದನು ಬ್ರಷನ್ನು ಹಿಡಿಯಬೇಕಾದರೆ ಮೊದಲು ತಿಪ್ಪಾಜಿಯವರನ್ನು ನೆನಸಬೇಕೆಂದು" ಇದು ಉತ್ಪ್ರೇಕ್ಷೆಯ ಮಾತಲ್ಲ ಸತ್ಯವಾದ ಮಾತು. ತಿಪ್ಪಾಜಿಯವರಿಗೆ ಬ್ರಷ್ ಮೇಲಿನ ಹಿಡಿತ ಅಷ್ಟು ಅದ್ಭುತವಾದದ್ದು, ಅಮೋಘವಾದ ರೇಖಾವಿನ್ಯಾಸ. ಕಲಾವಿದರು ಮೂಗಿನ ಮೇಲೆ ಬೆರಳಿಟ್ಟು ಆಶ್ಚರ್ಯ ಪಡುವಂತಹದ್ದು.

ಒಮ್ಮೆ ಖ್ಯಾತ ಕಲಾವಿದರಾದ ಆರ್.ಎಂ. ಹಡಪದ್‌ರವರು ಶಿವಮೊಗ್ಗೆಗೆ ಬಂದಾಗ ಈ ಚಿತ್ರಗಳನ್ನು ನೋಡಿ "ನಾನು ಶಿವಮೊಗ್ಗೆಗೆ ಬಂದದ್ದು ಸಾರ್ಥಕವಾಯಿತು" ಎಂದು ಉದ್ಗಾರ ತೆಗೆದಿದ್ದರು.

ತಿಪ್ಪಾಜಿಯವರ ಚಿತ್ರಗಳು ಅನೇಕ ಕಲಾವಿದರಿಗೆ ಸ್ಫೂರ್ತಿಯನ್ನು ನೀಡಿವೆ. ಇವರ ಚಿತ್ರಗಳಿಂದ ಪ್ರಭಾವಿತರಾದವರಲ್ಲಿ ಖ್ಯಾತ ಸಂಪ್ರದಾಯಿಕ ಚಿತ್ರ ಕಲಾವಿದರಾಗಿದ್ದ ದಿ: ಸುಬ್ರಹ್ಮಣ್ಯ ರಾಜುರವರು, ಇವರು ಶಿವಮೊಗ್ಗೆಗೆ ಬಂದಾಗಲೆಲ್ಲಾ ತಿಪ್ಪಾಜಿಯವರ ಚಿತ್ರಗಳನ್ನು ವೀಕ್ಷಿಸದೆ ಹೋಗುತ್ತಿರಲಿಲ್ಲ.

ತಿಪ್ಪಾಜಿಯವರ ಚಿತ್ರಗಳನ್ನು ವೀಕ್ಷಿಸಿದವರಿಗೆ ಒಬ್ಬ ಮಾನವ ಕೇವಲ ಕೈಮಾತ್ರದಿಂದ (ಯಾವ ಆಧುನಿಕ ಸಲಕರಣೆಗಳಿಲ್ಲದೆ) ಸ್ವಹಸ್ತದಿಂದ ನಿರ್ಮಿಸಿಕೊಂಡ ಬ್ರಷ್‌ಗಳಿಂದ ಇಂತಹ ಅದ್ಭುತವಾದ ಚಿತ್ರಗಳನ್ನು ಬಿಡಿಸುವುದು ಸಾಧ್ಯವೇ ಎಂಬ ಅನುಮಾನಶ್ಚರ್ಯಗಳು ಉಂಟಾದರೆ ಅದು ತಪ್ಪೇನಲ್ಲ. ಇಂತಹ ಕಲಾಕೃತಿಗಳನ್ನು ರಚಿಸಲು ತಿಪ್ಪಾಜಿಯವರು ತಮ್ಮ ಜೀವಿತ ಕಾಲದಲ್ಲಿ ಕರ್ತವ್ಯದಲ್ಲಿ ಎಷ್ಟು ಶ್ರದ್ಧೆ, ತಾಳ್ಮೆ, ಕರ್ತವ್ಯ ಪರತೆಯನ್ನು ಬೆಳೆಸಿಕೊಂಡು ಸಾಧನಶೀಲರಾಗಿದ್ದರು ಎಂಬುದು ಗೊತ್ತಾಗುತ್ತದೆ.

ಇಂತಹ ನಭೋತೋ ನ ಭವಿಷ್ಯತಿ ಎಂಬ ಚಿತ್ರಶಿಲ್ಪಿಗೆ ದೊರೆಯಬೇಕಾದಷ್ಟು ಪ್ರೋತ್ಸಾಹ ಪ್ರಚಾರ, ತಮ್ಮ ಜೀವಿತ ಕಾಲದಲ್ಲಿ ದೊರೆಯದಿರುವುದು ವಿಷಾದನೀಯ. ಇವರು ಉಳಿಸಿ, ಬೆಳೆಸಿದ ಸಾಂಪ್ರದಾಯಿಕ ಚಿತ್ರ, ಶಿಲ್ಪಗಳನ್ನು ರೂಢಿಸಿ, ಬೆಳೆಸುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ.



# ಅಜ್ಜಿಹಳ್ಳಿಯ ನಾಗೇಂದ್ರಾಚಾರ್ಯ

ಎ. ವಿ. ಚಂದ್ರಮೂರ್ತಿ

ಅಜ್ಜಿಹಳ್ಳಿಯ ನಾಗೇಂದ್ರಾಚಾರ್ಯರು ಕಲಿ ವೀರಾಚಾರ್ಯ ಮತ್ತು ಈರಮ್ಮನವರ ಮಗನಾಗಿ ೧೮೭೮ರಲ್ಲಿ ಜನಿಸಿದರು. ಇವರು ವಂಶ ಪಾರಂಪರ್ಯವಾಗಿ ಬಂದಂತಹ ಶಿಲ್ಪಕಲೆಯಲ್ಲಿ ಭಾಗಿಗಳಾಗಿ, ತಂದೆ ಕಲಿ ವೀರಾಚಾರ್ಯರು ಮತ್ತು ಹೊದಿಗೆರೆ ಶಿಲ್ಪಶಾಸ್ತ್ರ ನಿಪುಣ ಪುಟ್ಟಾಚಾರ್ಯರಲ್ಲಿ ಶಾಸ್ತ್ರೀಯವಾಗಿ ಕಲೆ, ಮರದಲ್ಲಿ ಅಭ್ಯಾಸ ಮಾಡಿ, ಬೆಳ್ಳಿ ಕೆಲಸವನ್ನು ಗೊಪ್ಪೇನಹಳ್ಳಿ ಶಿಲ್ಪಿ ಚಿಕ್ಕ ವೀರಾಚಾರ್ಯರಲ್ಲಿ ಅಭ್ಯಾಸ ಮಾಡಿದರು. ಪ್ರಥಮವಾಗಿ ಅಜ್ಜಿಹಳ್ಳಿಯ ಶ್ರೀ ಮಾರುತಿ ದೇವಾಲಯಕ್ಕೆ, ಇತರರೊಂದಿಗೆ ಸೇರಿ, ರಥವನ್ನು ಸಿದ್ಧಪಡಿಸಿದರು. ಶ್ರೀ ಸಿದ್ಧಲಿಂಗ ಸ್ವಾಮಿಗಳಲ್ಲಿ ಕಾಲಮಾನಕ್ಕೆ ಅನುಗುಣವಾಗಿ ವಿಗ್ರಹ ಕೆಲಸವನ್ನು ಅಭ್ಯಾಸ ಮಾಡಿ, ಅವರಿಂದ ಕಾಷ್ಠ ಶಿಲ್ಪ ಆಧಾರದ ಪ್ರಕಾರ ಅಭ್ಯಾಸ ಮಾಡಿದರು ಮತ್ತು ಸಂಸ್ಕೃತವನ್ನು ಅಭ್ಯಾಸ ಮಾಡಿ, ಅನೇಕ ವಿದ್ಯಾರ್ಥಿಗಳಿಗೆ ಮರ ಮತ್ತು ಶಿಲಾ ಕೆಲಸಗಳನ್ನು ಕಲಿಸಿ, ಪಂಚವಿಧ ಶಿಲ್ಪಿಗಳೆಂದು ಹೆಸರು ಪಡೆದಿದ್ದಾರೆ.

೧೯೪೫ರಲ್ಲಿ ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರು ಛನ್ನಗಿರಿ ತಾಲ್ಲೂಕು ಅಜ್ಜಿಹಳ್ಳಿ ಮಾರ್ಗವಾಗಿ, ಹುಲಿ ಬೇಟೆ ಮಾಡಲು ಹೋಗುತ್ತಿದ್ದ ಕಾಲದಲ್ಲಿ ಅಜ್ಜಿಹಳ್ಳಿಯಲ್ಲಿ ನಿಂತು, ಮಹಾರಾಜರಿಗೆ ಮಾಲಾರ್ಪಣೆ ಮಾಡಿದಾಗ ಅವರು, ನಾಗೇಂದ್ರ ಚಾರ್ಯರಿಗೆ ಏನುಬೇಕೆಂದು ಕೇಳಿದಾಗ, ದೊಡ್ಡಕೆರೆ ಏರಿ ಹೊಡೆದಿದೆ ಅದನ್ನು ರಿಪೇರಿ ಮಾಡಿಸಿ ಕೊಡಿ ಎಂದು ವಿನಂತಿಸಿದರು. ಅದಕ್ಕೆ ಮಹಾರಾಜರೂ ಅಲ್ಲೇ ಇದ್ದ ಇಂಜನೀಯರ್‌ಗೆ ಕೂಡಲೇ ರಿಪೇರಿ ಮಾಡುವಂತೆ ಆದೇಶಿಸಿದರು. ನಾಗೇಂದ್ರ ಚಾರ್ಯರು ಮುಂದಿನ ಪೀಳಿಗೆಗೆ ಅನುಕೂಲವಾಗುವಂತೆ ಶಿಲ್ಪ ಶಾಲೆ ಪ್ರಾರಂಭಿಸಲು ಸ್ಥಳ ಕೇಳಬಹುದಾಗಿತ್ತು. ಆದರೆ ಜನರಿಗೆ ಉಪಯುಕ್ತವಾಗಬೇಕೆಂಬುದೇ ಅವರ ಆಶಯವಾಗಿತ್ತು.

ಹೊರನಾಡಿಗೆ ರಥ ಮತ್ತು ಚನ್ನಗಿರಿ ತಾಲ್ಲೂಕು ಬೆಂಕಿ ಕೆರೆಗೆ ಮರದ ರಥ, ಚಿತ್ರದುರ್ಗದ ಕಬ್ಬಳಕ್ಕೆ ಮರದ ರಥ ತಯಾರಿಸಿಕೊಟ್ಟಿದ್ದಾರೆ. ಶೃಂಗೇರಿ ಶ್ರೀ ಶಾರದಾ ದೇವಾಲಯಕ್ಕೆ ಪಂಚಲೋಹದ ವಿಗ್ರಹ, ಶ್ರೀ ರಾಮದೇವರ ವಿಗ್ರಹ ಮಾಡಿ, ಸ್ವಾಮಿಗಳ ಯರಕದ ಪ್ರತಿಮೆಯನ್ನು ಮಾಡಿಕೊಟ್ಟಿದ್ದಾರೆ. ನಂತರ ಕೂಡ್ಲಿ ಸಂಗಮೇಶ್ವರ ದೇವಸ್ಥಾನಕ್ಕೆ ಮರದ ರಥ, ನವಗ್ರಹಗಳು, ಈಶ್ವರ, ಬಸವಣ್ಣನ ವಿಗ್ರಹಗಳನ್ನು ಮಾಡಿದ್ದಾರೆ. ಹಂಪೆಗೆ ರಥ ತಯಾರಿಸಿಕೊಟ್ಟಿದ್ದು, ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರ ಪತ್ನಿಗೆ ಶಾಸ್ತ್ರೀಯವಾಗಿ ಮೈಷಾಸುರ ವಿಗ್ರಹವನ್ನು ಮಾಡಿಕೊಟ್ಟಿದ್ದಾರೆ.

ಅನಂತರ ಕುರನೂರಿಗೆ ಮಹಾತ್ಮ ಗಾಂಧಿಯವರ ಐದಡಿ ಎತ್ತರದ ಎರಕದ ವಿಗ್ರಹ ಮಾಡಿಕೊಟ್ಟಿದ್ದಾರೆ. ಮೇಣದಿಂದ ತಯಾರಿಸಿದ ವಿಗ್ರಹವನ್ನು ಭದ್ರಾವತಿ ಕಬ್ಬಿಣ ಕಾರ್ಖಾನೆಯಲ್ಲಿ ಸಿದ್ಧಪಡಿಸಿದರು. ಗೊಪ್ಪೇನಹಳ್ಳಿ ಪರಮೇಶ್ವರಾಚಾರ್ಯರು, ಈಶ್ವರ ಚಾರ್ಯರು, ಭುಜಂಗಾ ಚಾರ್ಯರು, ಗದಗಿನ ಶಿಲ್ಪಿ ಸೋಮಣ್ಣ ಮತ್ತು ನಾನು ಇವರ ಬಳಿ ಶಾಸ್ತ್ರೀಯವಾಗಿ ಶಿಲ್ಪವನ್ನು ಕಲಿತಿದ್ದೇವೆ.

ಶಿಲ್ಪಿ ನಾಗೇಂದ್ರಚಾರ್ಯರು ಪಂಚವಿಧ ಶೈವಶಿಲ್ಪಿ ಎಂದು ಹೆಸರು ಪಡೆದು ಇವರು ಕ್ರೋಧಿನಾಮ ಸಂವತ್ಸರ ಮಾರ್ಗಶಿರ ತ್ರಯೋದಶಿ ಗುರುವಾರ ರಾತ್ರಿ ಶಿವ ಸಾಯುಜ್ಯ ಸೇರಿದರು.



# ಕಲಾ ಬ್ರಹ್ಮ ಪರಸಪ್ಪನವರು

ಎಸ್. ಕೆ. ಬಸವರಾಜ

ಅದು ಮಲೆನಾಡಿನ ಒಂದು ಹಳ್ಳಿ, ಆ ಹಳ್ಳಿಯಲ್ಲಿ ಪ್ರತಿ ವರ್ಷದಂತೆ ಜಾತ್ರೆ ನಡೆಯುತ್ತಿದೆ. ಜಾತ್ರೆಯ, ಜನಸಾಗರದ ನಡುವೆ ಒಂದಡೆ ಡೇರೆ ಹಾಕಿದ್ದಾರೆ. ಡೇರೆಯ ಮುಂದೆ ಜನಗಳು ನಾಮುಂದು-ತಾಮುಂದು ಎನ್ನುತ್ತಾ ಡೇರೆಯೊಳಗೆ ಹೋಗಲು ಕಾತರಿಸುತ್ತಿದ್ದಾರೆ. ಅವರಿಗೆಲ್ಲಾ ಡೇರೆಯೊಳಗಿನ ಸುಂದರ ಗೊಂಬೆಗಳನ್ನು ನೋಡುವ ಕಾತರ, ಸಂಭ್ರಮ. ಆ ಸುಂದರ ಗೊಂಬೆಗಳು 'ಕನ್ನೇಶ್ವರ ರಾಮನ ಕಥಾನಿರೂಪಣಾ ದೃಶ್ಯ'ವನ್ನು ಅಭಿನಯ ಪೂರ್ವಕವಾಗಿ ನಿರೂಪಿಸುತ್ತಿವೆ. ಮೂಕಿ-ಟಾಕಿ ಸಿನಿಮಾ ಇಲ್ಲದಿದ್ದ ಆ ಕಾಲದಲ್ಲಿ ಇಂಥಾ ರಂಜನೆ ನೀಡುವ ಗೊಂಬೆಗಳಿಂದ ಜನ ತುಂಬಾ ಖುಷಿಪಟ್ಟಿದ್ದುಂಟು. ೨೦ನೇ ಶತಮಾನದ ಆರಂಭದಲ್ಲಿ, ಡೇರೆಯೊಳಗೊಂದು ಆಕರ್ಷಕ ಗೊಂಬೆಗಳ ರಂಜನೀಯ ಪ್ರಪಂಚವನ್ನು ತೆರೆದಿಟ್ಟು ಜನತೆಗೆ ಖುಷಿ ಕೊಟ್ಟವರು, ಶಿವಮೊಗ್ಗಾ ಜಿಲ್ಲೆಯ ಶಿಕಾರಿಪುರದ ಶ್ರೀಯುತ ಪರಸಪ್ಪನವರು.

ಶ್ರೀಯುತ ಪರಸಪ್ಪನವರು ಶಿಕಾರಿಪುರದಲ್ಲಿ ೧೮೯೦ನೇ ಇಸ್ವಿಯಲ್ಲಿ ಜನ್ಮತಾಳಿದರು. ಇವರ ತಂದೆ ಚಿತ್ರಗಾರ ರಾಮಣ್ಣನವರು, ತಾಯಿ ಭರಮಾ ಬಾಯಿ. ತಂದೆ ರಾಮಣ್ಣನವರು ಕಾಷ್ಠ (ಮರ)ದ ಮೇಲೆ ಕೆತ್ತನೆ ಮಾಡಿ, ನಯನ ಮನೋಹರವಾಗಿ ಶಿಲ್ಪ ಕಲೆಯನ್ನು ಅರಳಿಸಿದವರು. ಇಂದಿಗೂ ಶಿಕಾರಿಪುರದಲ್ಲಿ ಕಲಾವಿದ ರಾಮಣ್ಣನವರ ಕಾಷ್ಠ ಕಲೆಯನ್ನು ಅನೇಕರ ಮನೆಗಳ ಕಂಬಗಳಲ್ಲಿ ಕಾಣಬಹುದಾಗಿದೆ. ಜಲವರ್ಣ ಮತ್ತು ತೈಲವರ್ಣ ಚಿತ್ರಗಳನ್ನೂ ಇವರು ಬಿಡಿಸುತ್ತಿದ್ದರು. ಅವರು ಬಿಡಿಸುತ್ತಿದ್ದ ಚಿತ್ರಗಳಲ್ಲಿ ನಯ, ನಾಜೂಕಾದ ರೇಖೆಗಳು ಕಾಣುವುದರ ಜೊತೆಗೇ ಚಿತ್ರಗಳಿಗೆ ಆಕರ್ಷಕವಾಗಿ ಬಣ್ಣತುಂಬಿದ ಪ್ರತಿಭೆಯೂ ಅದರಲ್ಲಿತ್ತು.

ಇವರು ಕೆಲವು ಕಾಲ ಶಿಕಾರಿಪುರಕ್ಕೆ ಹತ್ತಿರ ಇರುವ ಅಂಬಾರಗೊಪ್ಪ ಎಂಬ ಗ್ರಾಮದಲ್ಲಿ ಸ್ವಲ್ಪ ಜಮೀನು ಹೊಂದಿದ್ದು, ಕೃಷಿಕ ಜೀವನ ನಡೆಸಿದವರು. ಇವರು ಕಲಿತ ಕಾಷ್ಠಕಲೆಗೆ ಆಗ ಹೆಚ್ಚಿನ ಬೇಡಿಕೆ ಇರಲಿಲ್ಲ. ಕೃಷಿಯಿಂದ ಇವರ ಹೊಟ್ಟೆಪಾಡು ತಕ್ಕಮಟ್ಟಿಗೆ ನಡೆಯುತ್ತಿತ್ತು. ಆದ ಕಾರಣ ಇವರು ಹುಬ್ಬಳ್ಳಿಯ ರೈಲ್ವೆ ವರ್ಕ್‌ಷಾಪ್‌ನಲ್ಲಿ 'ಒಂದು ರೂಪಾಯಿ' ಕೂಲಿಯ ಆಶೆಗಾಗಿ ದುಡಿಯಲು ಹೋದರಂತೆ, ಆದರೆ ಅಲ್ಲಿನ ಒಂದೇ ತರಹದ ಯಾಂತ್ರಿಕ ಕೆಲಸಕ್ಕೆ ಬೇಸತ್ತು ಪುನಃ ಶಿಕಾರಿಪುರಕ್ಕೆ ವಾಪಸ್ ಬಂದುಬಿಟ್ಟರಂತೆ.

ಶಿಕಾರಿಪುರದಲ್ಲಿನ ಶ್ರೀಮಂತರೊಬ್ಬರು ತಮ್ಮ ನೂತನ ಮನೆಯ ಮರದ ಕಂಬ, ಬೋದಿಗೆಗಳನ್ನು ಕಲಾತ್ಮಕವಾಗಿ ಕೆತ್ತಿಸಲು ಕುಶಲ ಶಿಲ್ಪಿಗಳೊಬ್ಬರಿಗೆ ಕಾಯುತ್ತಿದ್ದರು. ಯಾರೋ

ಒಬ್ಬರು ಆಗ ಅವರಿಗೆ 'ಚಿತ್ರಗಾರ ರಾಮಣ್ಣ'ನವರ ಹೆಸರನ್ನು ಸೂಚಿಸಿದರಂತೆ. ಹುಬ್ಬಳ್ಳಿಯಿಂದ ತಮ್ಮ ನಾಲ್ಕು ಮಕ್ಕಳನ್ನು ಕರೆದುಕೊಂಡು ಬಂದ ರಾಮಣ್ಣನವರು ಶಿಕಾರಿಪುರದಲ್ಲಿ ಆ ಶ್ರೀಮಂತರ ಮನೆಯ ಕಲಸಗಳನ್ನು ಸುಂದರವಾಗಿ ಮಾಡಿಕೊಟ್ಟು ನಂತರ ಕಾಷ್ಠ ಕಲೆಯನ್ನೇ ಮುಂದುವರೆಸಿಕೊಂಡು ಹೋದರು. ಇಂಥ ಅಪರೂಪದ ಕಲಾವಿದರ ಮಗ 'ಪರಸಪ್ಪನವರು'.

ಪರಸಪ್ಪನವರು ತಂದೆಯಿಂದ ಕಾಷ್ಠ ಕಲೆಯನ್ನು ಕಲಿಯುವುದರ ಜೊತೆಗೆ ಮಾವನವರಾದ ರಾಣೋಜಪ್ಪನವರಲ್ಲಿ ಚಿತ್ರಕಲೆಯನ್ನು ಅಭ್ಯಾಸ ಮಾಡಲು ಪ್ರಾರಂಭಿಸಿದ್ದರು. ರಾಣೋಜಪ್ಪನವರು ಪ್ರಸಿದ್ಧ ಸಾಂಪ್ರದಾಯಿಕ ಚಿತ್ರಕಲಾವಿದರಾದ ಶ್ರೀಯುತ ತಿಪ್ಪಾಜಿಯವರ ಶಿಷ್ಯರು. ಇವರಲ್ಲಿ ಕಲಿಯುತ್ತಿರುವಾಗಲೇ ತಮ್ಮ ಕಲ್ಪನೆಗೆ ತೋಚಿದಂತೆ ವಿವಿಧ ಮಣ್ಣಿನ ಮೂರ್ತಿಗಳನ್ನೂ ಮಾಡುತ್ತಿದ್ದರು. ಪರಸಪ್ಪನವರಿಗೆ ತಂದೆಯವರಿಂದ ಕಲಿತ ಕಾಷ್ಠಕಲೆಯ ಜೊತೆಗೇ ವಿವಿಧ ಮಾಧ್ಯಮಗಳಲ್ಲಿ ಕೈಯಾಡಿಸುವ ಇಚ್ಛೆಯಾಯಿತು. ಅದಕ್ಕಾಗಿ ಬಂಗಾರ, ಬೆಳ್ಳಿ, ಹಿತ್ತಾಳೆ ಮತ್ತು ಕಲ್ಲುಗಳಲ್ಲೂ ಸಹ ಮೂರ್ತಿಗಳನ್ನು ಮಾಡಲು ಪ್ರಾರಂಭಿಸಿದರು.

ಪರಸಪ್ಪನವರು ಮೊದಮೊದಲು ಬಂಗಾರದಲ್ಲಿ ಒಡವೆಗಳನ್ನು ಮಾಡುತ್ತಿದ್ದರು, ಈ ಕೆಲಸವನ್ನು ಪಕ್ಕದ ಮನೆಯ ಅಕ್ಕಸಾಲಿಯವರಲ್ಲಿ ಕಲಿತುಕೊಂಡಿದ್ದರು. ಹೀಗೆಯೇ ಈ ಕೆಲಸದಲ್ಲಿ ಮುಂದುವರಿಯುತ್ತಿದ್ದಾಗ, ತಿಳಿದವರೊಬ್ಬರು 'ನಿನ್ನಲ್ಲಿ ಒಳ್ಳೆಯ ಕಲಾ ಪ್ರತಿಭೆಯಿದೆ' ಅದನ್ನು ದೈವತ್ವದ ಕಡೆಗೆ ಹೊರಳಿಸಿಕೋ, ದೇವರ ಕೆಲಸಗಳನ್ನು ಮಾಡು ಎಂದು ಹೇಳಿದರಂತೆ. ಇದನ್ನು ತಿಳಿದ ಪರಸಪ್ಪನವರು ಆ ಕೆಲಸವನ್ನು ಅಲ್ಲಿಗೇ ಕೈ ಬಿಟ್ಟು ಮುಂದೇನು? ಎಂದು ಯೋಚಿಸತೊಡಗಿದಾಗ ಆ ಸಮಯದಲ್ಲಿ ಅವರಿಗೆ ನೆನಪಿಗೆ ಬಂದಿದ್ದು ತಮ್ಮ ತಂದೆ ರಾಮಣ್ಣನವರು ಸ್ವಲ್ಪ ದಿನ ಹಿಂದೆ ಇದ್ದು, ಬಂದಿದ್ದ 'ಹುಬ್ಬಳ್ಳಿ'. ಅಲ್ಲಿಯಾದರೂ ಹೋಗಿ ತಮ್ಮ ಅದೃಷ್ಟ ಪರೀಕ್ಷೆ ಮಾಡಿಕೊಳ್ಳೋಣವೆಂದು ಹುಬ್ಬಳ್ಳಿಗೆ ಹೊರಟೇ ಬಿಟ್ಟರು. ಆ ಅಪರಿಚಿತ ಊರಿನಲ್ಲಿ ಇವರಿಗೆ ಯಾರು ಕೆಲಸ ಕೊಡುತ್ತಾರೆ? ಕೊನೆಗೆ ಇವರು ಒಬ್ಬ ಪಾತ್ರೆ ಅಂಗಡಿಯವರ ಪರಿಚಯ ಮಾಡಿಕೊಂಡು ಅವರ ಬೇಡಿಕೆ ಮೇರೆಗೆ ಅವರಿಗೆ 'ವೀರಭದ್ರ ದೇವರ ಹಲಗೆ ಮೂರ್ತಿ'ಯನ್ನು ಹಿತ್ತಾಳೆ ತಗಡಿನಲ್ಲಿ ಮಾಡಿ ತಂದುಕೊಡುವುದಾಗಿ ಒಪ್ಪಿಕೊಂಡರು. ಬೇರೆ ಕುಶಲ ಕರ್ಮಿಗಳು ಎರಡು ಮೂರು ದಿನಕ್ಕೆ ಒಂದು ಮೂರ್ತಿಯನ್ನು ಮಾಡಿ ತಂದು ಕೊಟ್ಟರೆ, ಇವರು ದಿನಕ್ಕೆ ಒಂದರಂತೆ ಮೂರ್ತಿಯನ್ನು ತಂದುಕೊಡುತ್ತಿದ್ದರು.

ಪ್ರಯೋಗಶೀಲರಾದ ಪರಸಪ್ಪನವರು ಒಂದೇ ತರಹದ ಮೂರ್ತಿಗಳ ಬೇಡಿಕೆ ಇದ್ದುದರಿಂದ ಒಂದು ಎರಕದ ಮೂರ್ತಿಯನ್ನು ಮಾಡಿ ಇಟ್ಟುಕೊಂಡಿದ್ದರು, ಅದರ ಮೇಲೆ ಹಿತ್ತಾಳೆ ಅಥವಾ ಬೆಳ್ಳಿಯ ತಗಡನ್ನು ಇಟ್ಟು ಮರದ ಸುತ್ತಿಗೆಯಿಂದ ಬಡಿದು ಅರ್ಧ ಕೆಲಸ ಮಾಡಿಕೊಂಡು, ಉಳಿದ ಅರ್ಧ ಕೆಲಸವನ್ನು ರಾಳಕ್ಕೆ ಹಚ್ಚಿ ತ್ವರಿತವಾಗಿ ಪೂರೈಸಿಕೊಡುತ್ತಿದ್ದರು.

ಪರಸಪ್ಪನವರು ಹುಬ್ಬಳ್ಳಿಯಲ್ಲಿರುವಾಗ ನಡೆದ ಇನ್ನೊಂದು ಘಟನೆ: ಅಲ್ಲಿಯ ಪ್ರಸಿದ್ಧ ರೂಪ ಶಿಲ್ಪಿ ಶ್ರೀಯುತ ವರ್ಕಡೆಯವರಿಗೂ ಇವರಿಗೂ ಒಳ್ಳೆಯ ಸ್ನೇಹವಾಯಿತು. ವರ್ಕಡೆಯವರು ಮುಂಬಯಿಯ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ್‌ನಲ್ಲಿ ಕಲಿತು ಬಂದವರಾಗಿದ್ದರು. ಪರಸಪ್ಪನವರಿಗೂ

ರೂಪಶಿಲ್ಪ ರಚನಾ ಕ್ರಮವನ್ನು ಕಲಿಯಬೇಕೆಂಬ ಆಸೆಯಾಯಿತು. ಆದರೆ ಆ ಕಾಲದಲ್ಲಿ ಈಗಿರುವಂತೆ ಶಿಲ್ಪ ಶಿಕ್ಷಣವಾಗಲಿ, ಸಾಮೂಹಿಕವಾಗಿ ಪ್ರಾತ್ಯಕ್ಷಿತೆಗಳಾಗಲೀ ನಡೆಯುತ್ತಿರಲಿಲ್ಲ. ಅದಕ್ಕಾಗಿ ನಿತ್ಯವೂ ವರ್ಕಡೆಯವರನ್ನು ಭೇಟಿ ಮಾಡುತ್ತಿದ್ದರು. ಆದರೆ ವರ್ಕಡೆಯವರು ಇವರು ಬಂದಾಗ ತಮ್ಮೆಲ್ಲ ಕೆಲಸದ ಸಾಮಾಗ್ರಿಗಳನ್ನು ಹಿಂದಕ್ಕೆ ತಳ್ಳಿ ಮಾತಿಗೆ ತೊಡಗುತ್ತಿದ್ದರು (ಬಹುಷಃ ವರ್ಕಡೆಯವರಿಗೆ ತಮ್ಮ ವೃತ್ತಿ ರಹಸ್ಯವನ್ನು ಪರಸಪ್ಪನವರಿಗೆ ತಿಳಿಸುವ ಇಚ್ಛೆ ಇರಲಿಲ್ಲ). ಹೀಗೆಯೇ ಒಮ್ಮೆ ಹೋದಾಗ ವರ್ಕಡೆಯವರ ಕೈ ಕೆಸರಾಗಿತ್ತು, ಸಾಮಗ್ರಿಗಳೆಲ್ಲ ಎದರುಗಡೆಯೇ ಬಿದ್ದಿದ್ದವು, ಕಣ್ಣಿನ ಅಂದಾಜಿನಲ್ಲೇ ನೋಡಿದ ಪರಸಪ್ಪನವರು ಎಲ್ಲವನ್ನೂ ಗ್ರಹಿಸಿ ಮನಗೆ ಬಂದು ಸಿದ್ಧಾರೂಢ ಸ್ವಾಮಿಯವರ ಒಂದು ನೈಜ ಶಿಲ್ಪವನ್ನು ಮಾಡಿಯೇ ಬಿಟ್ಟರು. ಪರಸಪ್ಪನವರಲ್ಲಿ ಇಂತಹ ಗ್ರಹಣ ಶಕ್ತಿ ಇದ್ದುದರಿಂದಲೇ ಇವರು ಅನೇಕ ಮಾಧ್ಯಮಗಳಲ್ಲಿ ಕೈಯಾಡಿಸಿ ಅವುಗಳನ್ನು ಕರಗತಮಾಡಿಕೊಳ್ಳಲು ಸಾಧ್ಯವಾಯಿತು.

ಪರಸಪ್ಪನವರಿಗೆ ಕೆಲವು ದಿನಗಳ ನಂತರ ಹುಬ್ಬಳ್ಳಿಯಿಂದ ಹೊರಟುಬರಲು ತಂದೆ ರಾಮಣ್ಣವರಿಂದ ಕರೆಬಂದಿತು. ತಂದೆಯವರ ಆರೋಗ್ಯವೂ ಕ್ಷೀಣಿಸುತ್ತಾ ಬಂದಿತ್ತು. ಇವರು ಬಂದ ಸ್ವಲ್ಪ ದಿನಗಳಲ್ಲಿಯೇ ರಾಮಣ್ಣನವರು ಸ್ವರ್ಗಸ್ಥರಾದರು. ಮುಂದೆ ಸಂಸಾರದ ಭಾರವೆಲ್ಲಾ ಪರಸಪ್ಪನವರ ಮೇಲೆ ಬಿದ್ದಿತು. ಆಗ ಈ ಕಡೆಯ ಸೀಮೆಗಳನ್ನು ನಡುಗಿಸಿದ ಪ್ರಸಿದ್ಧ ಕನ್ನೇಶ್ವರ ರಾಮನ ದಿನಚರಿ ದಿನಕ್ಕೊಂದರಂತೆ ಕಳೆಕಟ್ಟತೊಡಗಿತು. ಕೊನೆಗೆ ಕನ್ನೇಶ್ವರ ರಾಮನು ಆತ್ಮೀಯರ ದ್ರೋಹದಿಂದಾಗಿ ಪೊಲೀಸರಿಗೆ ಸೆರೆಸಿಕ್ಕು ಗಲ್ಲಿಗೇರಿದನು. ಜನಗಳಲ್ಲಿ ಈ ವಿಷಯ ಹಸಿರಾಗಿ ಇರುವಾಗಲೇ ಜನರ ನಾಡಿಮಿಡಿತವನ್ನು ಅರಿತು ಪರಸಪ್ಪನವರು ಅಣ್ಣ ತಮ್ಮಂದಿರೊಂದಿಗೆ ಒಟ್ಟುಗೂಡಿ ಈ ಕಥೆಗೆ ಸಂಬಂಧಪಟ್ಟವರ ಹಾಗೂ ಕನ್ನೇಶ್ವರ ರಾಮನ ಫೋಟೋಗಳನ್ನು ಶಿವಮೊಗ್ಗಾ ಜೈಲಿನಲ್ಲಿ ಕಷ್ಟಪಟ್ಟು ಸಂಗ್ರಹಿಸಿ ಅದರಂತೆಯೇ ಪ್ರತಿಮೆಗಳನ್ನು ಮರ ಹಾಗೂ ಕಿಟ್ಟಗಳಲ್ಲಿ ನಿರ್ಮಿಸಿಕೊಂಡು ಜಾತ್ರೆ, ಸಂತೆಗಳಲ್ಲಿ ಟೆಂಟುಹೂಡಿ 'ಕನ್ನೇಶ್ವರ ರಾಮನ ಸಾಹಸ' ಕಥೆಯ ಸನ್ನಿವೇಶಗಳ ನಿರೂಪಣಾ ದೃಶ್ಯಗಳನ್ನು ನಿರ್ಮಿಸಿ, ಜನಗಳಿಗೆ ಮನರಂಜನೆ ಕೊಡುತ್ತಾ ಬಂದರು. ಕಥೆಯ ಮಧ್ಯದಲ್ಲಿ ಕ್ರೂರರೂಪಿಯಾದ "ಮಲ್ನಾಡ ಚೌಡಿ" ಹಾಗೂ "ಬೆಳ್ಳುಳ್ಳಿ ರಾಮಾಚಾರಿ" ಪಾತ್ರವನ್ನೂ ಸೇರಿಸಿದ್ದರು. ಈ ಪ್ರದರ್ಶನದಲ್ಲಿ ಬಂದ ಆದಾಯದಿಂದ ಸಂಸಾರವನ್ನು ನಿರ್ವಹಿಸುತ್ತಿದ್ದರು. ಮುಂದೆ ಜನರಲ್ಲಿ ಮೂಕಿ-ಟಾಕಿ ಸಿನಿಮಾದ ಮೇಲೆ ಜನರ ಆಸಕ್ತಿ ಹೊರಳಿದಂತೆ ಈ ಪ್ರಯೋಗಗಳನ್ನು ಕೈ ಬಿಡಬೇಕಾಯಿತು.

ಪರಸಪ್ಪನವರು ಮುಂದೆ ಆರಿಸಿಕೊಂಡ ಕಾರ್ಯಕ್ಷೇತ್ರ 'ಶಿಲ್ಪಕಲೆ'. ಶಿಲೆಯಲ್ಲಿ ಕೂಡ ಇವರ ಕಲಾ ಪ್ರತಿಭೆ ನಯನಮನೋಹರವಾಗಿ ಅರಳಲು ಪ್ರಾರಂಭಿಸಿತು. ಆಗ ಶಿಕಾರಿಪುರದ 'ನಾಮದೇವ ಸಿಂಪಿ ಸಮಾಜ'ದವರಿಗೆ ವಿಠ್ಠಲ, ರುಕಮಾಯಿ, ಸತ್ಯಭಾಮರ ವಿಗ್ರಹಗಳು ಬೇಕಾಗಿತ್ತು. ಇದನ್ನು ಅತ್ಯಂತ ನಿಷ್ಠೆಯಿಂದ ಸುಂದರವಾಗಿ ಕೆತ್ತಿ ಇಟ್ಟಿದ್ದರು. ಆ ಸಮಯದಲ್ಲೇ ಈ ವಿಗ್ರಹಗಳನ್ನು ಕಂಡ ಸರ್ಕಾರಿ ಅಧಿಕಾರಯೊಬ್ಬರು 'ಇದನ್ನು ಮೈಸೂರಿನಲ್ಲಿ ನಡೆಯುವ ದಸರಾ ವಸ್ತು ಪ್ರದರ್ಶನಕ್ಕೆ ಕಳಿಸಿಕೊಡಿ ಬಹುಮಾನ ಬರಬಹುದು' ಎಂದು ಪರಸಪ್ಪನವರಿಗೆ ತಿಳಿಸಿದರಂತೆ, ಪರಸಪ್ಪನವರು

‘ಅದೆಲ್ಲಾ ಬೇಡ’ ಎಂದು ಸುಮ್ಮನಾದರು. ಆದರೆ ಆ ಅಧಿಕಾರಿಗಳೇ ಮುಂದೆ ನಿಂತು ಆ ವಿಗ್ರಹಗಳನ್ನು ಮೈಸೂರಿಗೆ ಕಳುಹಿಸಿದರು. ಅಲ್ಲಿ ಆ ವಿಗ್ರಹಗಳಿಗೆ ಬಹುಮಾನ ಮತ್ತು ‘ರಜತ ಪದಕ’ ಲಭ್ಯವಾಯಿತು. ಪರಸಪ್ಪನವರಿಗೆ ಕೊನೆಗೆ ಸರ್ಟ್‌ಫಿಕೇಟ್ ಸಿಕ್ಕಿತೇ ಹೊರತು ರಜತ ಪದಕ ದೊರೆಯಲಿಲ್ಲ. ಅದು ಮಧ್ಯವರ್ತಿಗಳ ಕೈ ಸೇರಿತು. ಯಾವುದಕ್ಕೂ ಆಸೆಪಡದ ಇವರು ತಮ್ಮ ಕಲಾಸೇವೆಯನ್ನು ಮುಂದುವರೆಸಿಕೊಂಡು ಹೋದರು.

ಹೀಗೆ ಇರುವಾಗ ತೀರ್ಥಹಳ್ಳಿಯ ಶ್ರೀ ರಾಮೇಶ್ವರ ದೇವಸ್ಥಾನದ ಲಿಂಗಕ್ಕೆ ‘ಬೆಳ್ಳಿ ಕವಚ’ ಹಾಗೂ ‘ರಜತ ಪಲ್ಲಕ್ಕಿ’ ಮಾಡಲು ಪರಸಪ್ಪನವರಿಗೆ ಕರೆಬಂದಿತು. ಅದಕ್ಕಾಗಿ ಬೇಕಾದ ಸಲಕರಣೆಗಳನ್ನು ಮಾಡಿಕೊಂಡು ತೀರ್ಥಹಳ್ಳಿಗೆ ಹೊರಟೇ ಬಿಟ್ಟರು. ಪರಸಪ್ಪನವರ ಕಾರ್ಯಕ್ಷೇತ್ರಗಳು ಆಗಾಗ ಬದಲಾಗುತ್ತಿದ್ದುದರಿಂದ ಬೇಕಾದ ಸಲಕರಣೆಗಳೂ ಬದಲಾಗುತ್ತಿದ್ದವು. ಅವೆಲ್ಲಾ ತಾವೇ ತಯಾರಿಸಿಕೊಂಡು ಕೆಲಸವನ್ನು ಮುಂದುವರೆಸುತ್ತಿದ್ದರು. ಯಾವ ಕೆಲಸಕ್ಕೂ ‘ಕಾಲದ ಮಿತಿ’ ಇರಲಿಲ್ಲ. ಎಷ್ಟೇ ದಿನಗಳಾಗಲಿ ಮನಸ್ಸಿಗೆ ತೃಪ್ತಿ ಬರುವವರೆಗೂ ಕೆಲಸವನ್ನು ಮುಂದುವರೆಸುತ್ತಿದ್ದರು. ತೀರ್ಥಹಳ್ಳಿಯ ರಾಮೇಶ್ವರನ ಕವಚದ ಜೊತೆಗೆ ಬೆಳ್ಳಿಯ ಪಲ್ಲಕ್ಕಿಯನ್ನು ಮಾಡಿಕೊಟ್ಟರು. ಅಲ್ಲಿಂದ ಆಗುಂಬೆಗೂ ಹೋಗಿ ಗೋಪಾಲ ಕೃಷ್ಣನಿಗೂ ‘ರಜತಪಲ್ಲಕ್ಕಿ’ಯನ್ನು ಮಾಡಿಕೊಟ್ಟು ಬಂದರು.

ಕಾಲಮುಂದುವರೆದಂತೆಲ್ಲಾ ಕಲಾವಿದನು ಹೊಸ ಹೊಸ ಅವಿಷ್ಕಾರಗಳನ್ನು ಶೋಧಿಸಲು ಹೊರಡುವಂತೆ, ಆಗ ವಿದೇಶಗಳಿಂದ ಬರುವ ವಸ್ತುಗಳು ಇವರ ಆಸಕ್ತಿಯನ್ನು ಕೆರಳಿಸಿದ್ದುವು. ಅವರ ಆಸಕ್ತಿಯ ಫಲವಾಗಿ ಅವರು ಸ್ವತಃ ತಯಾರಿಸಿದ ಕ್ಯಾಮೆರಾ, ಪಿಟೀಲು, ಪಿಯಾನೋಗಳು ಹೊರಬಂದವು. ಆ ಕಾಲದಲ್ಲಿ ಪರಸಪ್ಪನವರು ಈ ವಸ್ತುಗಳನ್ನು ಉಪಯೋಗಿಸುತ್ತಿದ್ದರಂತೆ.

ಪರಸಪ್ಪನವರು ತಮ್ಮ ಬಾಳನ್ನೇ ಕಲೆಗಾಗಿ ಸಮರ್ಪಿಸಿಕೊಂಡ ಅಪರೂಪದ ಕಲಾವಿದರು. ಅವರು ತಮ್ಮ ಜೀವಿತ ಕಾಲದಲ್ಲಿ ಎಂದೂ ಸುಮ್ಮನೆ ಕೂರುತ್ತಿರಲಿಲ್ಲ ಚೈತನ್ಯದ ಚಿಲುಮೆಯಾಗಿದ್ದರು ಎಂದರೆ ಉತ್ಪ್ರೇಕ್ಷೆಯಲ್ಲ. ಇಳಿವಯಸ್ಸಿನಲ್ಲಿ ಕೂಡ ಏನಾದರೊಂದು ಕೆಲಸ ಮಾಡುತ್ತಲೇ ಇದ್ದರು. ಅವರು ಹೇಳುತ್ತಿದ್ದ ಮಾತೊಂದಿದೆ. ‘ಕಲಾವಿದನಿಗೆ ಕೆಲಸವಿಲ್ಲದಿದ್ದರೆ ಅವನ ಕೆಲಸದ ಸಾಮಗ್ರಿಗಳನ್ನು ಎದುರಿಗೆ ಇಟ್ಟುಕೊಂಡು ಕುಳಿತರೆ, ಅವುಗಳೇ ಏನಾದರೂ ಮಾಡಲು ಕಲಾವಿದನನ್ನು ಪ್ರೇರೇಪಿಸುತ್ತವೆ’ ಎಂದು ಹೇಳುತ್ತಿದ್ದರು. ಪರಸಪ್ಪನವರಿಗೆ ಆಧ್ಯಾತ್ಮದ ಕಡೆಗೂ ಒಲವಿತ್ತು. ಅವರು ಹುಬ್ಬಳ್ಳಿಯಲ್ಲಿ ಇದ್ದಾಗ, ಆಗಾಗ್ಗೆ ಶ್ರೀ ಸಿದ್ಧಾರೂಢ ಮಠಕ್ಕೆ ಹೋಗಿ ಶ್ರೀಸ್ವಾಮಿಗಳೊಂದಿಗೆ ಆಧ್ಯಾತ್ಮಿಕ ಚರ್ಚೆ ಮಾಡುವ ವಾಡಿಕೆ ಇದ್ದಿತು. ಪರಸಪ್ಪನವರು ಶಾಲಾಭ್ಯಾಸ ಹೊಂದದಿದ್ದರೂ, ಅವರ ಸಂಗ್ರಹದಲ್ಲಿ ಹಲವಾರು ಆಧ್ಯಾತ್ಮಿಕ ಗ್ರಂಥಗಳು ಇದ್ದವು.

ಹೀಗೆ ಶ್ರೀ ಸ್ವಾಮಿಗಳೊಡನೆ ಚರ್ಚೆ ಮಾಡುತ್ತಾ ತಮ್ಮ ಕಲಾವೃತ್ತಿಯನ್ನು ಮುಂದುವರೆಸಿ ಕೊಂಡು ಹೋಗುವ ಗಂಡು ಸಂತಾನ ಇಲ್ಲದಿರುವಿಕೆಯನ್ನು ಒಮ್ಮೆ ನಿವೇದಿಸಿಕೊಂಡರು. ಆಗ ಶ್ರೀ ಸ್ವಾಮಿಗಳು ಪರಸಪ್ಪನವರಿಗೆ ಗಂಡು ಸಂತಾನ ಇಲ್ಲದುದಕ್ಕೆ ವಿಷಾದಿಸದೇ ಮುಂದೆ ಅವರ ಹೆಣ್ಣು ಮಗಳಿಂದಾಗುವ ಸಂತತಿಯೇ ಪ್ರತಿಭಾವಂತರಾಗಿ ಪ್ರಸಿದ್ಧರಾಗುವರೆಂದು ಸಮಾಧಾನ ಪಡಿಸಿದರು.

ಇಂತಹ ಕಲಾ ತಪಸ್ವಿಯ ಕಲಾಸಾಧನೆ ಮುಂದುವರೆಸಿಕೊಂಡು ಹೋಗುವ ಗಂಡುಮಕ್ಕಳು ಇವರಿಗೆ ಇರಲಿಲ್ಲವಾದರೂ ಇದ್ದ ಒಂದೇ ಹೆಣ್ಣು ಸಂತಾನ ಪಾರ್ವತಮ್ಮ. ಇವರ ಮಕ್ಕಳೇ ಇಂದಿನ ಖ್ಯಾತ ಶಿಲ್ಪಿಗಳಾದ ಕಾಶಿನಾಥ ಮತ್ತು ಸಹೋದರರು.

ಇವರ ಕಲಾಕೃತಿಗಳು, ಶಿವಮೊಗ್ಗಾದ ಗುಡ್ಡೇಕಲ್ ಶ್ರೀ ಸುಬ್ರಹ್ಮಣ್ಯ ಸ್ವಾಮಿ ದೇವಸ್ಥಾನದ ಎದುರಿಗಿರುವ ಕಲ್ಲಿನ ನವಿಲು ವಾಹನ, ಹನಸವಾಡಿಯ ನಂದಿ ವಾಹನ, ಕುಬಟೂರಿನ ಶಿವಲಿಂಗಕ್ಕೆ ಹಿತ್ತಾಳೆ ಕವಚ, ಶಿಕಾರಿಪುರದ ಹುಚ್ಚರಾಯ (ಆಂಜನೇಯ) ಸ್ವಾಮಿಗೆ ಪ್ರಭಾವಳಿ, ಭುಜ ಕೀರ್ತಿ, ಚನ್ನಹಳ್ಳಿಗೆ ಕಂಚಿನ ಬೀರ ದೇವರು, ಮರದ ಪಲ್ಲಕ್ಕಿ, ಶಿಕಾರಿಪುರ, ಸೂರರ ಸಿಂಧಿ ಸಮಾಜಕ್ಕೆ ವಿಠ್ಠಲ, ರುಕುಮಾಯಿ, ಸತ್ಯಭಾಮ ಶಿಲಾವಿಗ್ರಹಗಳು ಇನ್ನೂ ಮುಂತಾದವುಗಳು. ಸಾಧನಾಶೀಲರಾದ ಕಲಾಬ್ರಹ್ಮ ಪರಸಪ್ಪನವರು ಕಲೆ ಹಾಗೂ ಆಧ್ಯಾತ್ಮಗಳನ್ನು ಜೊತೆಜೊತೆಯಾಗಿ ಮೈಗೂಡಿಸಿಕೊಂಡು ಬಂದವರು. ಯಾವಾಗಲೂ ಶಾಂತ ಸ್ವಭಾವದ ಇವರು ೧೯೭೫ರಲ್ಲಿ ಚಿರಶಾಂತಿಯನ್ನು ಹೊಂದಿದರು.



# ಕಾಶಪ್ಪ ಯರಕದ

ಬಸವರಾಜ ಕರಬಸಪ್ಪನವರ

"ಹೊಟ್ಟೆಗೆ ಅಷ್ಟಕ್ಕಷ್ಟೆಯಾದರೂ ಆತ್ಮಕ್ಕೆ ಮಾತ್ರ ಸಂತೃಪ್ತಿಯ ಅನ್ನ ನೀಡಿದೆ, ಈ ಶಿಲ್ಪ ಕಲೆ"; ಎನ್ನುತ್ತಿದ್ದ ಗುಡೂರಿನ ಶಿಲ್ಪಿ ಕಾಶಪ್ಪ ಯರಕದವರು ಅಜ್ಞಾತ ತಪಸ್ವಿಯಂತೆ ಗ್ರಾಮೀಣದೊಡಲಲ್ಲಿ ಬಹು ಶ್ರದ್ಧೆಯಿಂದ ಸೇವೆ ಸಲ್ಲಿಸುತ್ತ ನಿತ್ಯ ತೃಪ್ತರಾಗಿದ್ದರು. ಕಲೆಯಷ್ಟೆ ಹಿರಿಮೆಯನ್ನು ವ್ಯಕ್ತಿತ್ವದಲ್ಲೂ ಸಾಧಿಸಿದ್ದರಿಂದ ಇವರನ್ನು ಕಂಡ ಈ ಭಾಗದ ಹೃದಯಗಳು ಉನ್ನತ ಗೌರವದಿಂದ ಬಾಗುತ್ತಿದ್ದವು. ಬದುಕಿನುದ್ದದ ಹರಿಗುಂಟ ಬಡತನದ ಧಾರೆ ಸದಾ ಹರಿಯುತ್ತಿದ್ದಾಗಲೂ ಚಾಣದ ಚಣ, ಚಣ ನಿನಾದ ಮಾತ್ರ ನಿಲ್ಲಲೇ ಇಲ್ಲ. 'ಉಸಿರಿರುವವರೆಗೂ ಉಳಿಯನ್ನು ಕೆಳಗಿಡಲಾರೆ', ಒಳತೋಟಿಯ ವಾಂಛೆಯನ್ನು ಅಕ್ಷರ ಸಹ ಪಾಲಿಸಿ ಅಸುನೀಗೀದ ಶಿಲ್ಪಿಯ ಬದುಕಿನಲ್ಲಿ ಒಮ್ಮೆಯಾದರೂ ಸುಖ ಸಮೃದ್ಧಿಯ ಮಹಾಪೂರ ಉಕ್ಕಲೇ ಇಲ್ಲ.

ಅದೆಷ್ಟೋ ಹಗಲು ರಾತ್ರಿಗಳನ್ನು ಮಡಿಚಿ ಶ್ರದ್ಧೆ ಭಕ್ತಿಯಿಂದ ತನ್ನ ಪ್ರತಿಭೆಯನ್ನು ಧಾರೆಯೆರೆದು ಶಾಸ್ತ್ರೋಕ್ತವಾಗಿ ಕಂಡರಿಸುತ್ತಿದ್ದ ದೇವಿ ಬನಶಂಕರಿಯ ಸುಂದರ ಮೂರ್ತಿಯಲ್ಲಂದು ಜೀವಕಳೆ ಸೆಲೆಯೊಡೆಯುತ್ತಿದ್ದಂತೆ, ಶಿಲ್ಪಜ್ಞ, ಕಾಶಪ್ಪನವರ ಎದೆಯಲಂದು ತೆಕ್ಕಿ, ತೆಕ್ಕಿಯಾಗಿ ಖುಷಿ ಚಿಮ್ಮಿ ಪುಟಿಯಿತು. 'ಶಕ್ತಿದೇವಿ ಇನ್ನು ಪೂಜೆಗೆ ಯೋಗ್ಯಳು, ಎನ್ನುವ ಮಾತಿನ ಬೆನ್ನ ಹಿಂದೆಯೇ, 'ಅಮ್ಮನ ಪ್ರತಿಷ್ಠಾಪನ ದಿನದಿಂದೆ ನನ್ನ ಮರಣ' ಎಂದಾಗ ಕುಟುಂಬಕ್ಕಷ್ಟೆ ಅಲ್ಲ ಇಡಿ ಗ್ರಾಮಕ್ಕೆ ಬರಸಿಡಿಲು ಹೊಡೆದಂತಾಯಿತು. ಸ್ವಗ್ರಾಮದಿಂದ ಹನ್ನೆರಡು ಕಿಲೋಮೀಟರ್ ಅಂತರದಲ್ಲಿರುವ ಅಮೀನಗಡ ಗ್ರಾಮದ ದೇವಾಲಯದಲ್ಲಿ ದೇವಿ ಬನಶಂಕರಿಯ ಮೂರ್ತಿ ಪ್ರತಿಷ್ಠಾಪನೆಗೊಳ್ಳುವ ದಿನ ಬಂದಿತು. ಶಿಲ್ಪಿಯ ಪವಾಡ ಸದೃಷ್ಯವಾಣಿಯನ್ನು ಒರೆಗೆ ಹಚ್ಚಲು ಗುಡೂರಿನಿಂದ ಅಮಿನಗಡದವರೆಗೆ ಕೂಗಳತೆಗೂಬ್ಬರಂತೆ ಜನ ನಿಂತರು. ಇತ್ತ ದೇವಿಯ ಪ್ರತಿಷ್ಠಾಪನೆಯಾಯಿತು, ಎಂಬ ಸುದ್ದಿ ಹೋಗುತ್ತಿದ್ದಂತೆ ಅತ್ತ ಗುಡೂರಿನಿಂದ ಶಿಲ್ಪಿಯ ಮರಣದ ವಾರ್ತೆ ಬಂತು ಎಂಥ ಮಹಾನ್ ಶಿಲ್ಪಿ ಇವರು!

ಹಳ್ಳಿಗಾಡಿನ ಪರಿಸರದಲ್ಲಂತೂ ಸಂಪೂರ್ಣ ಪ್ರಾಚೀನ ಶಿಲ್ಪಕಲೆಯೆ ಉಸಿರಾಡಿಸುತ್ತಿದ್ದ ಕಾಲವದು. ಮೂರ್‍ನಾಲ್ಕು ಶತಮಾನಗಳಿಂದಲೂ ಕಲಾರಾಧನೆಯನ್ನೆ ನಡೆಯಿಸಿಕೊಂಡು ಬಂದಿರುವ ಯರಕದ ಕುಟುಂಬವೊಂದು ಗುಡೂರಿನಲ್ಲಿತ್ತು. ಕಲೆಯನ್ನೆ ನಂಬಿ ಜೀವಿಸುತ್ತಿದ್ದ ಈ ವಿಶ್ವಕರ್ಮ ಜನಾಂಗದ ಕಾಳಪ್ಪ ರುದ್ರಮ್ಮ ದಂಪತಿಗಳ ಎರಡನೆಯ ಮಗನೆ ಕಾಶಪ್ಪನವರು. ಬಾಗಲಕೋಟಿ

ಜಿಲ್ಲೆಯ ಹುನಗುಂದ ತಾಲ್ಲೂಕಿನ ಗುಡೂರ ಗ್ರಾಮದಲ್ಲಿ ೧೯೦೦ರಲ್ಲಿ ಜನಿಸಿದ ಈ ಕೂಸಿಗೆ ತಂದೆ ರುದ್ರಪ್ಪನವರಿಂದ ಸ್ವಲ್ಪಮಟ್ಟಿಗೆ ಕಿವುಡತನವು ಬಳುವಳಿಯಾಗಿ ಬಂತು. ಯರಕದ ವಂಶವೃಕ್ಷಕ್ಕೆ ಹಬ್ಬಿದ ಕಲಾ ರಸಬಳ್ಳಿಯಲ್ಲಿ ಘಮ, ಘಮಿಸುವ ಪುಷ್ಪವಾಗಿ ಅರಳಿದ ಶಿಲ್ಪಿ ಕಾಶಪ್ಪನವರು; ಅನುಭವ ಕ್ಷಿತಿಜವನ್ನು ಹಿಗ್ಗಿಸಿಕೊಳ್ಳುತ್ತ ಹಳ್ಳಿಗಾಡಿನಲ್ಲಿಯೇ ಬೆಳೆದವರು. ಜನ್ಮಜಾತವಾಗಿ ಬಂದಿದ್ದ ಕಲೆಯ ಆರಾಧನೆಯಲ್ಲಿ ಬದುಕಿನ ಸಾರ್ಥಕತೆ ಕಂಡು ಕೊಂಡು ೧೯೪೨ರಲ್ಲಿ ಕಾಯ ಅಳಿದರೂ ಕೀರ್ತಿ ಉಳಿಸಿ ಹೋದವರು.

ಹದಗೊಳಿಸಿದ ಕಿಟ್ಟದಲ್ಲಿ ಗೌರಿ, ಗಣೇಶ, ಶಿವ, ಲಕ್ಷ್ಮೀ, ಸೀತಾ, ರಾಮ, ಹನುಮಂತ ಮಂತಾದ ಅನುಪಮ ವಿಗ್ರಹಗಳನ್ನು ತಯಾರಿಸುತ್ತ ಪ್ರಾಥಮಿಕ ಶಿಕ್ಷಣ ಹಂತದಲ್ಲಿಯೇ ಕೈಚಳಕ ತೋರಿಸುತ್ತಿದ್ದ ಈ ಬಾಲಕನ ಚಿತ್ತ; ಅಕ್ಷರಭ್ಯಾಸದ ಕಡೆಗೆ ಹೊರಳಿ ಅರಳಲೇ ಇಲ್ಲ. ವಯೋಮಿತಿಗೆ ಮೀರಿದ ಕರಕುಶಲತೆಯನ್ನು ತೋರಹತ್ತಿದ ಹುಡುಗನ ರೆಪ್ಪೆಯಡಿ ಕಲಾದೇವತೆಯೇ ನರ್ತಿಸತೊಡಗಿದ್ದಳು. ಇತ್ತ ಹೊತ್ತು ಮೂಡಿದರೆ, ತತ್ತರಿಸುವ ಕುಟುಂಬದ ಹತ್ತಾರು ತುತ್ತಿನ ಚೀಲಗಳು; ಸಮಸ್ಯೆಗಳ ಪೊದೆಯನ್ನೆ ಎದುರಿಸುತ್ತ ನಲುಗುತ್ತಿದ್ದವು. ಹೀಗಾಗಿ ಈ ಪೋರನ ಓದಿಗೆ ತಾನು ತಾನಾಗಿಯೇ ಕೊಕ್ಕೆ ಬಿದ್ದಿತು. ಕನ್ನಡ ಆರನೇ ವರ್ಗದಲ್ಲಿದ್ದಾಗಲೇ ಶಾಲೆಗೆ ಬೆನ್ನು ತಿರುಗಿಸಿದ ಬಾಲಕ, ಮುಂದೆ ಯಾವ ಕಲಾಶಾಲೆಯ ಹೊಸ್ತಿಲನ್ನೂ ತುಳಿಯಲಿಲ್ಲ. ಅರಿವನ್ನೆ ಗುರುವನ್ನಾಗಿಸಿಕೊಂಡು ಅನುಭವದ ಕುದಿತದಲ್ಲಿ ಪಾಕವಾಗಿ ಹೊರಹೊಮ್ಮುತ್ತ ಸಾಧನೆಯ ಹಾದಿಯಲ್ಲಿ ಪ್ರತಿಭೆಯನ್ನು ಬೆಳಗಿಸಿದ, ಕಲೆಯ ನೆಲೆಯಲ್ಲಿಯೆ ಉಸಿರಾಡಿಸುತ್ತ ಉಳಿಗೆ ಮೈಯೊಡ್ಡಿದ ಕಲ್ಲಿನಲ್ಲಿ ಅಪೂರ್ವ ಸೃಷ್ಠಿಯನ್ನು ಮಾಡಿದನಾದರೂ ಈ ಶಿಲ್ಪಿಯ ಹೆಸರು ಮಾತ್ರ ಕಲಾ ಲೋಕದಲ್ಲಿ ಕೇಳಿ ಬರಲಿಲ್ಲ.

ಅವಿಭಕ್ತ ಕುಟುಂಬದ ಗಾಡಿಯನ್ನು ಎಳೆಯಲು ಮನೆಯ ಚಿಕ್ಕ ಪುಟ್ಟ ಮಕ್ಕಳೂ ಸಹ ಉಪ ಕಸಬುಗಳಲ್ಲಿ ಕೈಯಾಡಿಸುವ ಅನಿವಾರ್ಯತೆ ಬಂದಾಗ, ಬಾಲಕ ಕಾಶಪ್ಪ, ಮನೆತೊರೆದು ಬಾದಾಮಿ ತಾಲ್ಲೂಕಿನ ಕಾತರಕಿ ಗ್ರಾಮಕ್ಕೆ ವಲಸೆ ಹೋಗ ಬೇಕಾಗಿ ಬಂತು. ಮನಸಿಲ್ಲದಿದ್ದರೂ ಮೂರ್‍ನಾಲ್ಕುವರ್ಷ ಬಂಗಾರದಾಭರಣ ಕಲೆಯಲ್ಲಿ ತಲೆಹಾಕಿ ಮರಳಿ ಮನೆಗೆ ಬಂದ ಹುಡುಗ, ವಂಶಪಾರಂಪರ್ಯವಾಗಿ ಹರಿದು ಬಂದಿದ್ದ ಯರಕದ ಉದ್ಯೋಗದಲ್ಲಿಯೆ ತನ್ನನ್ನು ತೊಡಗಿಸಕೊಂಡ. ಬದುಕಿನ ಏರು ಪೇರುಗಳು ಹಿಗ್ಗಾ ಮುಗ್ಗಾ ಜಗ್ಗಾಡುತ್ತಿದ್ದಾಗಲೂ ಕಲೆಯ ಶಿಸ್ತು ನಿಯಮಗಳ ಸೀಮೋಲಂಘನೆ ಮಾಡಲಿಲ್ಲ. ಮಧ್ಯಮ ವರ್ಗದವರ ಪೋಷಣೆಯಿಂದಲೆ ಲೋಹಶಿಲ್ಪಗಳ ನಿರ್ಮಾಣದಲ್ಲಿ ಮುಂದುವರೆಯುತ್ತ ಕೈಯಿಟ್ಟ ಕಾಯಕದಲ್ಲಿ ತಾದಾತ್ಮ ಭಾವನೆ ಹೊಂದಿ ತನ್ನೊಳಗಿನ ಪ್ರತಿಭೆಯನ್ನೆಲ್ಲಾ ಸೂರೆಮಾಡಿದ. ಆಕರ್ಷಕ ಸುಳುಹು ಹೊಳಹುಗಳ ಕೆಲಸಗಳೊಂದಿಗೆ ಪಾರ್ವತಿ-ಪರಮೇಶ್ವರ, ಸೀತಾ-ರಾಮ, ಹನುಮಂತ, ಗಣೇಶ, ಲಕ್ಷ್ಮೀ ಹೀಗೆ ಅದೆಷ್ಟೋ ಬಲು ಸುಂದರ ಶಿಲ್ಪಗಳನ್ನು ಸೃಷ್ಟಿಸುತ್ತ ಪಂಚಲೋಹದ ವಸ್ತುನಿರ್ಮಾಣದಲ್ಲೂ ಹೆಸರು ಮಾಡಿದರು. ಆದರೆ ಬರಬರುತ್ತ ಯಂತ್ರಗಳ ಪಡಿ ಅಚ್ಚಿನಲ್ಲಿ ಲೋಹದ ವಿಗ್ರಹಗಳು ತಯಾರಗುತ್ತಿದ್ದಂತೆ ಲೋಹದ ಗೃಹ ಕೈಗಾರಿಕೆಗೆ ಮತ್ತೆ ಕುತ್ತುಗಳ ಸರಮಾಲೆ ಅಪ್ಪಳಿಸತೊಡಗಿತು.

ಗುಡೂರಿಗೆ ಸಮೀಪವಾಗಿಯೆ ಇದ್ದ ಬಾದಮಿ, ಐಹೊಳೆ. ಪಟ್ಟದಕಲ್ಲು ದೇವಾಲಯಗಳ ಮರಳುಗಲ್ಲಿನ ಲೋಕೋತ್ತರ ಶಿಲ್ಪಗಳು ಎಳವೆಯಲ್ಲಿಯೇ ಕಾಶಪ್ಪನ ಎದೆಯಾಳದಲ್ಲಿ ನೆಟ್ಟು ಕಾಡಿಸಿ ಪೀಡಿಸಿದ್ದವು. ಒಳಗೊಳಗೆ ಉಕ್ಕರುಲಾಡುತ್ತಿದ್ದ ಆಸಕ್ತಿಗೆ ಅಭಿವ್ಯಕ್ತಿ ನೀಡಲು ಶಿಲ್ಪ ಕಲೆಯನ್ನು ಅರಿಸಿಕೊಂಡ ಅಂತಃಸತ್ವದ ಈ ಕಲಾವಿದ, ಉಳಿಯ ಮೇಲೆ ಹಿಡಿತ ಸಾಧಿಸುತ್ತ ಶಿಲ್ಪ ಕಲೆಗೆ ಕಪ್ಪು ಹತ್ತದಂತೆ ಅರ್ಥವತ್ತಾದ ಹೆಜ್ಜೆಗಳನ್ನೆ ಹಾಕಿದ.

ನಿರ್ಮಾಣದ ಮೂಲ ಸೂತ್ರಗಳನ್ನು ಕರಗತ ಮಾಡಿಕೊಳ್ಳುತ್ತ ಮೊಟ್ಟ ಮೊದಲಿಗೆ ಕಪ್ಪು ಶಿಲೆಯಲ್ಲಿ ಜೀವ ಕಳೆ ತುಂಬಿದ ವಿಗ್ರಹ ಮಹಾದಾನಿ ಸಕ್ರಿ ವೆಂಕಪ್ಪನವರದಾಗಿತ್ತು. ಹಾವ, ಭಾವ ಭಂಗಿ ಶರೀರದ ಒಲವು ನಿಲವು ಹೀಗೆ ಮಾನವ ಪ್ರತಿಮೆಗಳಲ್ಲಿ ಕೈ ಪಳಗಿಸಿಕೊಂಡ ಶಿಲ್ಪಕಲಾಕೋವಿದ ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರ ಮೂರ್ತಿಯನ್ನು ಕೆತ್ತಿ ಆಗಿನ ರಾಜ್ಯಪಾಲ ಧರ್ಮವೀರರಿಗೆ ಅರ್ಪಿಸಿ ಬಹು ಮೆಚ್ಚಿಗೆಯನ್ನು ಪಡೆದಿದ್ದರು. ದೇವತಾ ವಿಗ್ರಹಗಳ ಅಳತೆ, ತಾಳ ಮಾನ ಲಕ್ಷಣಗಳನ್ನೆಲ್ಲ ಸಿದ್ಧಿಸಿಕೊಂಡಿದ್ದ ಆಚಾರಶೀಲ ಕಾಶಪ್ಪನವರು ಸ್ನಾನ ಮುಗಿಸಿ, ಭಕ್ತಿ ಭಾವದಿಂದ ಚಾಣ ಹಿಡಿದು ಕುಳಿತರಾಯ್ತು ಶಿಲ್ಪ ರಚನೆಯಲ್ಲಿಯೇ ಧ್ಯಾನಾಸಕ್ತರಾಗಿ ಬಿಡುತ್ತಿದ್ದರು. ಪ್ರಾಚೀನ ಶಿಲ್ಪ ಶಾಸ್ತ್ರಕ್ಕೆ ತಕ್ಕಂತೆ ಕಡೆದ ಅನೇಕ ದೇವತಾ ವಿಗ್ರಹಗಳೆಂದು ಮೆಣಸಗಿ, ಹೂನೂರು, ಮುಧೋಳ, ಅಮಿನಗಡ ಮುಂತಾದ ಗ್ರಾಮಗಳಲ್ಲಿ ಪೂಜೆಗೊಳ್ಳುತ್ತ ಕಾಶಪ್ಪನವರ ಕಲಾ ಪ್ರೌಢಿಮೆಯನ್ನು ಸಾರುತ್ತಿವೆ. ಒಂದೊಂದು ಉಳಿಹೊಡೆತವೂ ಜೀವ ಪಡೆದುಕೊಂಡು ಸೃಷ್ಟಿಯಾದ ಶ್ರೀ ಗುರು ರಾಘವೇಂದ್ರ ರಾಯರ ಮತ್ತು ಪೂಜ್ಯ ಮಧ್ವಾಚಾರ್ಯರ ವಿಗ್ರಹಗಳು ಮೇಣೇದಾಳ ದೇಸಾಯಿಯವರ ವಾಡೆಯಲ್ಲಿದ್ದು ಪ್ರಾಚೀನ ಶಿಲ್ಪ ಸೌಂದರ್ಯವನ್ನು ಸಾಕ್ಷಾತ್ಕಾರ ಮಾಡುತ್ತಲಿವೆ.

ಆಧ್ಯಾತ್ಮ, ಜೋತಿಷ್ಯ, ಸಂಗೀತ (ತೊಗಲು ವಿದ್ಯೆ)ಗಳನ್ನು ಶಾಸ್ತ್ರೋಕ್ತವಾಗಿ ಅಭ್ಯಸಿಸುತ್ತ ಕೈಹಾಕಿದ್ದೆಲ್ಲವನ್ನು ಕರಗತ ಮಾಡಿಕೊಂಡಿದ್ದ ಈ ಅಪ್ಪಟ ಜೀವ, ಒಣ ಪ್ರತಿಷ್ಠೆಯ ಕಸರತ್ತಿಗೆ ಮನಸ್ಸು ಮಾಡದೆ, ಜೀವ ಸೆಲೆಯುದ್ದಕ್ಕೂ ತನ್ನ ಪ್ರತಿಭೆಯನ್ನು ಅನಾವರಣಗೊಳಿಸುತ್ತ ಬಂದರೂ; ಅದೃಷ್ಟ ಖುಲಾಯಿಸುವ ಕ್ಷಣಗಳು ಮಾತ್ರ ಇಣುಕಿ ಸಹ ನೋಡಲಿಲ್ಲ. ಆಸಕ್ತಿಗೆ ದಾರಿ ಮಾಡಿಕೊಂಡು ಬೆಳೆಯುತ್ತ ಹಲವು ಹತ್ತು ಹವ್ಯಾಸಗಳನ್ನು ರೂಢಿಸಿಕೊಂಡಿದ್ದ ಈ ನಿಷ್ಕಪಟ ಹೃದಯ ಸಮಾಜಕ್ಕಾಗಿ ಮಿಡಿಯುತ್ತಿದ್ದ ಪರಿ ಅದೆಷ್ಟು ಉನ್ನತ; ದುಡ್ಡುದುಗ್ಗಾಣಿಗೆ ತುಟಿಬಿಚ್ಚದೆ ಹಳ್ಳಿಗಾಡಿನ ಚಿಕ್ಕ ಪುಟ್ಟ ಕಾಯಿಲೆಗಳಿಗೆ ಗಿಡಮೂಲಿಕೆಗಳ ಔಷದ ನೀಡುತ್ತ ಸರ್ಪ ಹುಣ್ಣಿಗೆ ಎತ್ತಿದ ಕೈಯಾಗಿದ್ದರು. ನಿತ್ಯದ ತನ್ನ ಶಿಲ್ಪ ಕಾಯಕದೊಂದಿಗೆ ರಂಗೋತ್ಸವ ತುಂಬಿಕೊಂಡಿದ್ದ ಈ ಕಲಾವಿದ, ನಾಟಕ ಬಯಲಾಟಗಳ ಪಾತ್ರಗಳಿಗೆ ಬಣ್ಣ ಬಳಿಯುತ್ತ ಮುಕುಟ ಮುಖವಾಡಗಳನ್ನು ತಯಾರಿಸುತ್ತ ಒಂದೂವರೆ ದಶಕಗಳುದ್ದಕೂ ಗ್ರಾಮೀಣ ಭಾಗದ ರಂಗಭೂಮಿ ರಂಗೇರುವಂತೆ ಕಾಳಜಿ ಕಕ್ಕುಲಾತಿ ವಹಿಸಿದ್ದ. ಆ ಭಾಗದ ನಾಟಕ ಆಟಗಳ ತಬಲಾ ಮಂಡಲಿಗಳ ಮೇಲೆ ಇವರ ನೀಳ ಬೆರಳುಗಳ ಚಮತ್ಕಾರ ಮೋಡಿ ಮಿಂಚದಿದ್ದರೆ ಅಲ್ಲಿಯ ಶ್ರೋತೃಗಳಿಗೆ ತೃಪ್ತಿಯೇ ಆಗುತ್ತಿದ್ದಿಲ್ಲ. ಪ್ರಶ್ನೆಕೇಳುವ ವೇಳೆ, ಅವರು ಕುಳಿತ ದಿಕ್ಕುಗಳ ಮೇಲಿಂದ ಜ್ಯೋತಿಷ್ಯವನ್ನು ನುಡಿಯುತ್ತಿದ್ದ ಇವರು, ಈ ಎಲ್ಲಾ ಹವ್ಯಾಸಗಳನ್ನು ಗುರವಿನ ಮುಖೇನ ರಾತ್ರಿ ಸಮಯದಲ್ಲಿಯೇ ಕಲಿತ್ತಿದ್ದಾರೆ. ಇವು ಯಾವನ್ನು

ಕಾಯಕವನ್ನಾಗಿ ಮಾಡಿಕೊಳ್ಳದೆ ಸಮಾಜ ಸೇವೆಯಂದೇ ತಿಳಿದು ಕೊಂಡಿದ್ದ ಇವರು ಇಂಥವುಗಳಿಗೆ ಕಾಸು ವಸೂಲಿ ಮಾಡಿದರೆ ಸಂಕಲ್ಪ ಸಿದ್ಧಿ ಸಡಿಲುಗೊಳ್ಳುವದೆಂದೇ ಭಾವಿಸಿದ್ದರು.

ಸರಳ ಸಜ್ಜನಿಕೆಯ ಕಲಾವಿದ ಕಾಳಪ್ಪ ಈರಮ್ಮ ದಂಪತಿಗಳಿಗೆ ಇಬ್ಬರು ಗಂಡು ಹಾಗೂ ಇಬ್ಬರು ಹೆಣ್ಣು ಮಕ್ಕಳಿದ್ದು, ಕೊನೆಯವರಾದ ಷಣ್ಮುಖಪ್ಪನವರೆ ಅಪ್ಪನ ಕೀರ್ತಿಯನ್ನು ಸ್ಥಿರಗೊಳಿಸಿದವರು. ಇಲಕಲ್ಲ ನಗರದೆಲ್ಲೊಂದು ಚಾಲುಕ್ಯ ಶಿಲ್ಪಕಲಾ ಮಂದಿರ ಕಟ್ಟಿಕೊಂಡು ರಕ್ತಕ್ಕಂಟಿಗೊಂಡು ಬಂದ ಶಿಲ್ಪ ಕಲೆಯಲ್ಲಿ ಅಹರ್ನಿಶಿ ಶ್ರಮಿಸುತ್ತ ಖ್ಯಾತಶಿಲ್ಪಿ ಎಂದೆ ಹೆಸರು ಮಾಡಿದವರು. ಇವರ ಅಪೂರ್ಣ ವಿಗ್ರಹಗಳು ಹೊರ ರಾಜ್ಯಗಳಲ್ಲಷ್ಟೇ ಅಲ್ಲ ವಿದೇಶಗಳಲ್ಲೂ ಮೆರೆದಿವೆ. ಕಲೆಯಲ್ಲಿ ದೃಢ ನಿಷ್ಠೆಯನ್ನಿರಿಸಿ ಸಾಧನೆಯ ಹಾದಿಯಲ್ಲಿ ಶಿಲ್ಪ ಕಲೆಯ ಕಂಪ ಸೂಸುತ್ತಿರುವ ಈ ಧೀಮಂತ ಸ್ಥಪತಿಗೆ ಕರ್ನಾಟಕ ಸರಕಾರ ೧೯೯೧ರಲ್ಲಿ ರಾಜ್ಯ ಪ್ರಶಸ್ತಿ ನೀಡಿದ್ದಲ್ಲದೆ ಈಗ ಶಿಲ್ಪ ಕಲಾ ಅಕಾಡೆಮಿಯ ಸದಸ್ಯ ಸ್ಥಾನ ನೀಡಿ ಗೌರವಿಸಿದೆ. ರಾಜ್ಯ ಹಾಗೂ ರಾಷ್ಟ್ರ ಮಟ್ಟದ ಶಿಲ್ಪ ಕಾರ್ಯಾಗಾರ ಮತ್ತು ವಿಚಾರ ಸಂಕಿರಣಗಳಲ್ಲಿ ಪಾಲ್ಗೊಂಡಿರುವ ಈ ಶಿಲ್ಪಿಯ ಸಾಧನೆಗಳು, ಭಾವಚಿತ್ರದೊಂದಿಗೆ ಅಂತರಾಷ್ಟ್ರೀಯ ದಾಖಲೆಯ ಗ್ರಂಥಗಳಲ್ಲಿ ಬೆಳಕು ಕಾಣುತ್ತ ಸ್ಥಪತಿಯ ಔನತ್ಯವನ್ನು ಎತ್ತಿ ತೋರಿಸಿವೆ. ಇವರ ಪುತ್ರರಾದ ಉಮೇಶ ಮತ್ತು ಮೌನೇಶರಿಬ್ಬರೂ ಪದವೀಧರರಾಗಿದ್ದು ಶಿಲ್ಪ ಕಲೆಯ ಮಾರ್ಗದಲ್ಲಿ ಎಚ್ಚರದಪ್ಪದ ಹೆಜ್ಜೆಗಳನ್ನಿರಿಸಿದ್ದಾರೆ.

ಈಗ್ಗೆ ಸುಮಾರು ತೊಂಬತ್ತು ವರ್ಷಗಳ ಹಿಂದೆ ಕಬ್ಬಿಣದ ಕದರು (ಡಬ್ಬಣದಂತಹದು) ಹಿಡಿದು ಎಣ್ಣೆ ಹಲಿಗೆಯ ಮೇಲೆ ಚಿತ್ರ ಬಿಡಿಸುವದನ್ನು ಕಲಿತ ಕಾಶಪ್ಪ; ತಾನೆ ತಯಾರಿಸಿದ ಕಿಟ್ಟದಲ್ಲಿ ಸುಂದರ ಮೂರ್ತಿಗಳನ್ನು ನಿರ್ಮಿಸುತ್ತ ತಂದೆ ಕಾಳಪ್ಪನ ಅಕ್ಷಿಗಳಲ್ಲಿ ಭರವಸೆಯ ಬೆಳಕಾಗಿ ಮಿಂಚಿದವರು; ಮುಂಧೆ ಬರಬರುತ್ತಾ ಕಲ್ಲಿನೊಡಲಲ್ಲಿ ಶಿಲ್ಪ ಚಮಾತ್ಕಾರ ಗೈಯುತ್ತ ಕಲೆಗೆ ವೈಭವ ತಂದ ಹಿರಿಮೆಯನ್ನು ತಮ್ಮದಾಗಿರಿಸಿಕೊಂಡವರು. ಬದುಕನ್ನೆ ಕಲೆಗೆ ಮುಡಿಪಾಗಿಟ್ಟು ಸಾಕಷ್ಟು ಸಂಘರ್ಷಗಳನ್ನು ಎದುರಿಸಿದ ಧೀಮಂತ ಕಲಾಕಾರ ಕಡುಬಡತನದಲ್ಲೂ ಅರಿವಿನ ಬೆಳಕನ್ನೇ ಉರಿಸಿದನೇ ಹೊರತು ತಮ್ಮನ್ನೆಂದೂ ಕಳೆದುಕೊಳ್ಳಲೇ ಇಲ್ಲ. ಇಂಥವರಿಂದಲ್ಲವೇ ಇನ್ನೂ ಶಿಲ್ಪ ಕಲೆ ಉಸಿರಾಡಿಸುತ್ತಿರುವದು.



# ಚಿನ್ನಪ್ಪಯ್ಯಚಾರ್ಯರು

ಎಸ್. ಬಿ. ಪದ್ಮನಾಭಾಚಾರ್

ಶಿಲ್ಪಿ ಚಿನ್ನಪ್ಪಯ್ಯಚಾರ್ಯರು ಕೋಲಾರ ಜಿಲ್ಲೆ, ಮಾಲೂರು ತಾಲ್ಲೂಕು, ಶಿವಾರಪಟ್ಟಣ ಗ್ರಾಮದಲ್ಲಿ ಶಿಲ್ಪಿ ಶಂಕರಾಚಾರ್ಯರು ಮತ್ತು ಚನ್ನಮ್ಮ ಇವರಿಗೆ ಏಕೈಕ ಪುತ್ರರಾಗಿ ೧೯೦೨ರ ಫೆಬ್ರವರಿ ತಿಂಗಳ ಶಿವರಾತ್ರಿ ಹಬ್ಬದ ದಿನ ಜನಿಸಿದರು. ಇವರು ಶಿವಾರಪಟ್ಟಣದ ಆದಿ ಶಿಲ್ಪಿಗಳಾದ ಶ್ರೀ ಬಸವಲಿಂಗಾಚಾರ್ಯರ ಮುಖ್ಯ ವಂಶಸ್ಥರು. ಇವರ ಬಾಲ್ಯ ವಿದ್ಯಾಭ್ಯಾಸ ಶಿವಾರಪಟ್ಟಣದ ಸರ್ಕಾರಿ ಮಾಧ್ಯಮಿಕ ಶಾಲೆಯಲ್ಲಿ ೧೯೧೪ರಲ್ಲಿ ಲೋಯರ್ ಸೆಕೆಂಡ್ರಿ ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ತಮ್ಮ ಮನೆತನದ ಮುಖ್ಯ ಕಸುಬಾದ ಶಿಲ್ಪಕಲೆಗೆ ಸಂಬಂದಪಟ್ಟ ಮೂರ್ತಿ ಶಿಲ್ಪದ ಮುಖ್ಯ ಅಂಗವಾದ ಧ್ಯಾನಶ್ಲೋಕ, ಮನೋನ್ಮಾಣ ಪ್ರಮಾಣ, ತದಂಗವಾದ ಚಿತ್ರಕಲೆ, ಶಿಲ್ಪ ಆಗಮ ಶಾಸ್ತ್ರಗಳನ್ನು ಮತ್ತು ಅನುವಂಶಿಕವಾಗಿ ಬಂದ ಆಚಾರ, ವಿಚಾರಗಳನ್ನು ತಮ್ಮ ತಂದೆಯವರಾದ ಶಿಲ್ಪಿ ಶಂಕರಾಚಾರ್ಯರಿಂದ ಶ್ರದ್ಧಾ ಭಕ್ತಿಗಳಿಂದ ಕಲಿತರು. ಬಾಲ್ಯದಲ್ಲಿಯೇ ಇವರು ಅನುವಂಶಿಕರಾದ ಶಿಲ್ಪಿ ಗಂಗಾಧರಾಚಾರ್ಯ ಎಂಬುವವರಿಂದ ವೇದಾದ್ಯಯನವನ್ನು ಕರಗತ ಮಾಡಿಕೊಂಡರು ಮತ್ತು ಆಂಧ್ರದಿಂದ ಬಂದ ಶ್ರೀ ವೆಂಕಟೇಶ ಶಾಸ್ತ್ರಿಗಳಿಂದ ಜ್ಯೋತಿಷ್ಯಶಾಸ್ತ್ರದ ಅನೇಕ ಅಂಗಗಳಾದ ಜಾತಕ ಭಾಗ, ಪ್ರಶ್ನ ಸಿದ್ಧಾಂತ, ಅಂಗ ಸಾಮುದ್ರಿಕೆ ಇತ್ಯಾದಿಗಳನ್ನು ಕ್ರಮವಾಗಿ ಕಲಿತರು.

ಇವರಿಗೆ ಮನೆಯ ಸಾಹಿತ್ಯ ಕ್ಷೇತ್ರದಲ್ಲಿ ನಿತ್ಯ ಪಾರಾಯಣಕ್ಕೆ ಬಂದಿದ್ದ ಆಂಧ್ರ ಮಹಾಕವಿಗಳಾದ ಶ್ರೀನಾಥ ಮತ್ತು ಪೋತನಾಮಾತ್ಯ ಹೆಸರಾಂತ ಕವಿಗಳಿಂದ ರಚಿಸಲ್ಪಟ್ಟ, ಭಾಗವತದ ದ್ವಾದಶ, ಸ್ಕಂದಗಳು, ಹರವಿಲಾಸ, ವೀರಭದ್ರವಿಜಯ ಇತ್ಯಾದಿ ಮಹಾಕಾವ್ಯಗಳು ಅನೇಕ ಗುರುಗಳಿಂದ ಪಾಠ, ಪ್ರವಚನ ನಡೆದು, ಈ ಕಾವ್ಯಗಳು ಅವರ ಪ್ರತಿನಿತ್ಯ ಜೀವನದ ಒಂದು ಅಂಗವಾಗಿ ಪರಿಣಮಿಸಿತ್ತು ಮತ್ತೆ ಕೆಲವರು ಶಾಸ್ತ್ರಿಗಳಿಂದ ಸಂಸ್ಕೃತದ, ರಾಮಾಯಣ, ಮಹಾಭಾರತ, ಕಾಳಿದಾಸನ ರಘುವಂಶ ಮಹಾಕಾವ್ಯ ಮತ್ತು ಕುಮಾರಸಂಭವ ಇತ್ಯಾದಿ ಸಂಸ್ಕೃತ ಕಾವ್ಯಗಳ ವಿದ್ಯಾಭ್ಯಾಸವು ನಡೆಯಿತು.

## ಶಿಲ್ಪ ಕೃತಿಗಳು

ಅನಂತರ ಇವರು ತಮ್ಮ ತಂದೆಯವರ ಬಳಿ ಮತ್ತು ಅವರ ವಂಶಜರಿಂದ ಶಿಲಾಶಿಲ್ಪ,

ಲೋಹಶಿಲ್ಪ, ಲೋಹದ ತಗಡಿನ ಉಬ್ಬು ಕೆತ್ತನೆ ಕೆಲಸ, ಶಿಲ್ಪದ ಇತ್ಯಾದಿ ಅನೇಕ ಪ್ರಕಾರಗಳನ್ನು ಕಲಿತು ಕಲೆ ಕರಗತ ಮಾಡಿಕೊಂಡರು. ಇದರ ಜೊತೆಗೆ ಮುಖ್ಯವಾಗಿ ಬೇಕಾದ ವಾಸ್ತುಶಾಸ್ತ್ರವನ್ನು ಆಳವಾಗಿ ಅಧ್ಯಯನ ಮಾಡಿಕೊಂಡರು. ಇವರ ಮೊದಲ ಶಿಲಾಶಿಲ್ಪವೆಂದರೆ ಇದೇ ಕೋಲಾರಜಿಲ್ಲೆಯ ಹೆಸರಾಂತ ಕೈವಾರದ ಯೋಗಿ ನಾರಾಯಣಪ್ಪನವರ ಪ್ರತಿಮೆ. ಈಗಲೂ ಪ್ರವಾಸಿಗರ ಜನ-ಮನವನ್ನು ಸೆಳೆಯುವ ಶಿಲ್ಪವಾಗಿ ಉಳಿದಿದೆ.

ಇವರ ಕೈಯಿಂದ ನಿರ್ಮಿಸಿದ ಅನೇಕ ಮೂರ್ತಿಗಳು ಆಸೇತು ಹಿಮಾಚಲ ಪರ್ಯಂತವೇ ಅಲ್ಲದೇ ದೇಶ ವಿದೇಶಗಳಲ್ಲಿ ಪ್ರಖ್ಯಾತ ಹೊಂದಿ ಅನಂತವಾಗಿ ಪೂಜಾ ಭೋಗವನ್ನು ಪಡೆಯುತ್ತಿದೆ. ಇದಕ್ಕೆ ಮುಖ್ಯವಾಗಿ ಕಾರಣ ಭೂತವಾದದ್ದು ಏನೆಂದರೆ ಅವರ ದಿನನಿತ್ಯದ ಅನುಷ್ಠಾನ, ಇವರು ದೇವಿ ಉಪಾಸಕರು. ಅಪಾರ ಬಂದುವರ್ಗದಲ್ಲಿ ಇವರು ಪ್ರೀತಿಯನ್ನು ಸಂಪಾದಿಸಿಕೊಂಡಿದ್ದರು. ಇವರಿಗೆ ಸಂತಾನವಿಲ್ಲದ ಕಾರಣ ಶಿವಾರಪಟ್ಟಣ ಗ್ರಾಮದ ಮಧ್ಯದಲ್ಲಿ ಶ್ರೀರಾಮ ದೇವಾಲಯದ ಭವ್ಯ ಕಟ್ಟಡವನ್ನು ಕಟ್ಟಿಸಿ ಪುನೀತರಾಗಿದ್ದಾರೆ. ಅವರ ಹೆಸರು ಆಚಂದ್ರಾರ್ಕವಾಗಿ ಉಳಿಯುವಂತೆ ಮಾಡಿದ್ದಾರೆ. ಇವರು ವಿದ್ಯಾ, ವಿನಯ ಸಂಪನ್ನರು, ಸಹೃದಯರು, ಇವರು ಸದಾ ಹಸನ್ಮುಖಿಗಳು, ಇವರ ಬಂದುವರ್ಗದಲ್ಲಿ ಅನೇಕಾನೇಕರಿಗೆ ಉಪನಯನ, ವಿವಾಹಾದಿ ಮಂಗಳ ಕಾರ್ಯಗಳನ್ನು ಮಾಡಿ ಕೀರ್ತಿಗಳಿಸಿದ್ದಾರೆ. ಇವರು ಅನೇಕರ ವಿದ್ಯಾಭ್ಯಾಸಕ್ಕೆ ಸಹಾಯ ಮಾಡಿದ್ದಾರೆ ಮತ್ತು ಕಷ್ಟದಲ್ಲಿರುವವರಿಗೆ ಅನುಕಂಪನ್ನು ತೋರಿಸುತ್ತಿದ್ದರು. ಇವರ ಬಳಿ ಅನೇಕ ಮಂದಿ ಶಿಲ್ಪಕಲೆಯನ್ನು ಕಲಿತು ಈಗ ಪುರಸ್ಕೃತರಾಗಿದ್ದಾರೆ. ಅವರ ಶಿಷ್ಯರಲ್ಲಿ ಕೆಲವರು ರಾಜ್ಯಪ್ರಶಸ್ತಿ, ರಾಷ್ಟ್ರಪ್ರಶಸ್ತಿಗಳನ್ನು ಗಳಿಸಿದವರು ಇದ್ದಾರೆ.

ಈ ಕೆಳಗೆ ಅವರ ಮಾಡಿಕೊಟ್ಟ ಮುಖ್ಯ ಶಿಲ್ಪಗಳ ಕಿರುಪರಿಚಯವನ್ನು ತಿಳಿಸಿದೆ.

ಇಂದಿಗೆ ೭೦ ವರ್ಷಗಳ ಹಿಂದೆ ಅವರು ತಯಾರಿಸಿದ ಬೆಂಗಳೂರು ಸಿಟಿ ಸೀತಾಪತಿ ಅಗ್ರಹಾರದ ಶ್ರೀ ರಾಘವೇಂದ್ರ ಸ್ವಾಮಿಗಳ ಬೃಂದಾವನ ಈಗಲೂ ಅನನ್ಯವಾಗಿ ಪೂಜಿಸಲ್ಪಡುತ್ತಿದೆ. ಬೆಂಗಳೂರು ಸಿಟಿ ರಂಗಸ್ವಾಮಿ ಗುಡಿ ಬೀದಿಯ ಶ್ರೀ ತುಪ್ಪದ ಆಂಜನೇಯಸ್ವಾಮಿ ಗುಡಿಯ ಶ್ರೀ ಸೀತಾಲಕ್ಷ್ಮಣ ಸಮೇತ ಶ್ರೀ ಕೋದಂಡ ರಾಮದೇವರು. ಸಾಲಿಗ್ರಾಮ ಕೃಷ್ಣಶಿಲೆಯ ಶಿಲ್ಪವು ಜೀವಂತ ಕಳೆಯಾಗಿದೆ. ತುಮಕೂರು ಜಿಲ್ಲೆಯ ಕ್ಯಾತಸಂದ್ರದ ಶ್ರೀರಾಮಲಿಂಗೇಶ್ವರ ಸ್ವಾಮಿ ದೇವಾಲಯದ ಶಿಲಾಮೂರ್ತಿಗಳು ಮತ್ತು ಉತ್ಸವ ಮೂರ್ತಿಗಳನ್ನು ಮಾಡಿದ್ದು, ಪ್ರತಿಷ್ಠಾ ಕಾಲದಲ್ಲಿ ಇವರ ಶಿಲ್ಪಕಲಾ ಪ್ರತಿಭೆಗೆ ಮೆಚ್ಚಿ ಬಂಗಾರದ ಪದಕವನ್ನು ನೀಡಿ ಗೌರವಿಸಲಾಗಿದೆ.

ಇವರು ಮಾಡಿದ ಶಿಲಾಮೂರ್ತಿಗಳನ್ನು ಆಂಧ್ರಪ್ರದೇಶದ ವಿಜಯನಗರದ ಸಂಸ್ಥಾನದ ದೊರೆಗಳಾದ ಶ್ರೀಶ್ರೀಶ್ರೀ ಅಲಕನಾರಾಯಣ ಗಜಪತಿ ಮಹಾರಾಜರು ಇವರ ಶಿಲ್ಪ ಚಾತುರ್ಯವನ್ನು ಮೆಚ್ಚಿ ಬಂಗಾರದ ಪದಕವನ್ನು ನೀಡಿ ಗೌರವಿಸಿರುತ್ತಾರೆ. ಇವರು ಆಂಧ್ರಪ್ರದೇಶದ ಗೋದಾವರಿತೀರ ರಾಜಮಹೇಂದ್ರದ ಶ್ರೀ ಶೃಂಗೇರಿ ಶಾಖಾಮಠಕ್ಕೆ ಪಟ್ಟದ ಶ್ರೀಶ್ರೀಶ್ರೀ ಪರಮಹಂಸ ಪರಿವ್ರಾಜಾಕಾಚಾರ್ಯ ನಾರಾಯಣನಂದ ಸರಸ್ವತಿ ಸ್ವಾಮಿಗಳು ಇವರ ಕಲಾನೈಪುಣ್ಯತೆಗೆ ಮೆಚ್ಚಿ "ಶಿಲ್ಪಕಲಾರ್ಣವ" ಎಂಬ ಬಿರುದನ್ನು ಮತ್ತು ಬಂಗಾರದ ಘಂಟಾ ಕಂಕಣವನ್ನು ತಮ್ಮ ಅಮೃತ ಹಸ್ತದಿಂದ ನೀಡಿ

ಗೌರವಿಸಿರುತ್ತಾರೆ. ಇವರು ಅಮೃತಶಿಲೆಯಲ್ಲಿ ಶಾಸ್ತ್ರೀಯವಾಗಿ ಸುಂದರವಾಗಿ ತಯಾರಿಸಿಕೊಟ್ಟ ಚಿನ್ಮಾತ್ರ ಶಾರದ ಅಮ್ಮನವರು, ದಶ ಭುಜಗಣಪತಿ, ದತ್ತಾತ್ರೇಯ ಮೂರ್ತಿಗಳ ಕಲಾ ನೈಪುಣ್ಯತೆಯನ್ನು ಮೆಚ್ಚಿ ಶ್ರೀಶ್ರೀಶ್ರೀ ಪರಮಹಂಸ ಪರಿವ್ರಾಜಕಾಚಾರ್ಯ ನಾರಾಯಣನಂದ ಸರಸ್ವತಿ ಸ್ವಾಮಿಗಳು ಈ ಮೇಲಿನ ಬಿರುದನ್ನು, ಪದಕವನ್ನು ನೀಡಿ ಗೌರವಿಸಿದ್ದಾರೆ.

ಇವರು ಒರಿಸ್ಸಾ ಪ್ರಾಂತ್ಯದ ಬರಹಾಂಪುರ ಸಿಟಿಯಲ್ಲಿನ ಹತ್ತಾರು ದೇವಾಲಯಗಳಲ್ಲಿ ಅಂದರೆ ಶ್ರೀ ಕೋದಂಡರಾಮ, ಶ್ರೀಸತ್ಯನಾರಾಯಣ ಶ್ರೀ ಕಾಶಿವಿಶ್ವನಾಥ ಇನ್ನು ಅನೇಕ ದೇವಾಲಯಗಳಿಗೆ ಶಿಲಾಮೂರ್ತಿಗಳನ್ನು ರಚಿಸಿ ಕೊಟ್ಟು ಶ್ರೀ ಕೋಟಾಜಗನ್ನಾಯಕಲು, ಪೋಲಾಕಿ ಶ್ರೀ ರಂಗಮ್ ನೂಲು ಗಣೇಶಂ, ಚಿಟ್ಟಿ ವೆಂಕಟಸ್ವಾಮಿ ಮೊದಲಾದ ಗಣ್ಯವ್ಯಕ್ತಿಗಳಿಂದ ಪ್ರಶಸ್ತಿಗಳನ್ನು ಪಡೆದು ಕೀರ್ತಿಯನ್ನು ಗಳಿಸಿದ್ದಾರೆ.

ಇವರು ಒಮ್ಮೆ ರಾಜಮಹೇಂದ್ರಕ್ಕೆ ಪ್ರಯಾಣ ಮಾಡುತ್ತಿದ್ದಾಗ ಯಾವುದೋ ನಿಮಿತ್ತ ಆಂಧ್ರದಲ್ಲಿ ರೈಲ್ವೆ ಮುಷ್ಕರದಿಂದ ೩ ದಿನಗಳ ಕಾಲ ರೈಲು ಇದ್ದ ಸ್ಥಳದಲ್ಲೇ ಇರಬೇಕಾಯಿತು, ಆಗ ಇವರಿಗೆ ಮದ್ರಾಸು ಸಿಟಿ ಅಡಿಯಾರ್‌ನ ಶ್ರೀ ಅನಂತ ಪದ್ಮನಾಭಸ್ವಾಮಿ ದೇವಾಲಯದ ಪ್ರಧಾನ ಅರ್ಚಕರಾದ ಶ್ರೀಯುತ ಲಕ್ಷ್ಮಿನಾರಾಯಣ ದೀಕ್ಷಿತರ ಪರಿಚಯ ಆಯಿತು. ಆ ಅರ್ಚಕರು ರಾಜಮಹೇಂದ್ರದ ಶ್ರೀ ಶೃಂಗೇರಿ ಶಾಖಾ ಶಂಕರಮಠದ ಪ್ರತಿಷ್ಠಾ ಕಾರ್ಯದಲ್ಲಿ ಪ್ರಧಾನ ಆಗಮಿಕರಾಗಿ ಭಾಗವಹಿಸಲು ಪ್ರಯಾಣ ಮಾಡುತ್ತಿದ್ದರು, ಆಗ ಆಗಮಿಕರು ಶಿಲ್ಪಿ ಚಿನ್ನಪ್ಪಯ್ಯಾಚಾರ್ಯರನ್ನು ಕುರಿತು ಮಾತನಾಡುತ್ತಾ ಅವರಿಗೆ ಒದಗಿರುವ ಸಂದೇಹದ ಬಗ್ಗೆ ಪ್ರಶ್ನಿಸಿದರು. ಶಿಲ್ಪಿಗಳೇ ನಮ್ಮ ದೇವಾಲಯದ ಮುಖ್ಯ ಉತ್ಸವಮೂರ್ತಿ ಬಿಂಬ ಮತ್ತು ಹಸ್ತಗಳು ಬೇರೆ ಬೇರೆ ಬಣ್ಣದಿಂದ ವಿಭಿನ್ನವಾಗಿವೆ. ಇದು ಬೆಸಿಕೆ ಮಾಡಿದಂತೆ ಇವೆ. ಈ ಉತ್ಸವ ಮೂರ್ತಿಯನ್ನು ನಿತ್ಯಕಾಲ ಅರ್ಚನೆಗೆ ಅರ್ಹವಾಗಿರುತ್ತವೆಯೇ ಎಂದು ಪ್ರಶ್ನಿಸಿದಾಗ ಈ ಮೂರ್ತಿಗಳು ಪೂಜಾರ್ಹವಲ್ಲ ಎಂದು ತಿಳಿಸಿದರು. ಇದನ್ನು ತಾವು ಈ ಪ್ರತಿಷ್ಠಾ ನಂತರ ನಮ್ಮ ದೇವಾಲಯಕ್ಕೆ ಭೇಟಿ ನೀಡಿ ಮೂರ್ತಿಗಳನ್ನು ಪರಿಶೀಲಿಸಿ, ಯಾವುದಕ್ಕೂ ಶಾಸ್ತ್ರ ಸಮ್ಮತವಾದ ಅಭಿಪ್ರಾಯವನ್ನು ತಾವು ಇಲ್ಲಿನ ಅಂದರೆ ಮದ್ರಾಸಿನ ಶಿಲ್ಪಿಗಳು ಮತ್ತು ಆಗಮ ಪಂಡಿತರು ಮಧ್ಯೆ ಮಂಡಿಸುವುದಾದರೆ ನಮ್ಮ ಮನಸ್ಸಿಗೆ ನೆಮ್ಮದಿ ಉಂಟುಮಾಡಿದಂತಾಗುತ್ತದೆ ಎಂದು ತಿಳಿಸಿದರು. ಅದರಂತೆ ಶಿಲ್ಪಿಗಳು ಗೊತ್ತು ಪಡಿಸಿದ ಒಂದು ಸೂಕ್ತ ದಿನ ಮದ್ರಾಸಿನ ಶಿಲ್ಪಿಗಳ ಮತ್ತು ಆಗಮ ಪಂಡಿತರುಗಳ ಮಧ್ಯೆ ಶಿಲ್ಪಶಾಸ್ತ್ರ ಸಮ್ಮತವಾದ ಅಭಿಪ್ರಾಯವನ್ನು ಮಂಡಿಸಿದಾಗ ಅಲ್ಲಿನ ಗಣ್ಯವ್ಯಕ್ತಿಗಳು ಒಪ್ಪಿಕೊಂಡರು.

## ಸಾಮಾಜಿಕ ಕಾರ್ಯದಲ್ಲಿ

ಅದರಂತೆ ಹಳೆ ಮೂರ್ತಿಗಳನ್ನು ಕರಗಿಸಿ ಶಿಲ್ಪಿಗಳಾದ ಚಿನ್ನಪ್ಪಯ್ಯಾಚಾರ್ಯರು ಪುನರಪಿ ಶ್ರೀ ಅನಂತ ಪದ್ಮನಾಭಾಸ್ವಾಮಿ ಉತ್ಸವ ಮೂರ್ತಿಗಳನ್ನು ನೂತನವಾಗಿ, ಶಾಸ್ತ್ರೀಯವಾಗಿ, ಸುಂದರವಾಗಿ ತಯಾರಿಸಿ ಕೊಟ್ಟಿರುತ್ತಾರೆ. ಈ ಮೂರ್ತಿಗಳ ಪ್ರತಿಷ್ಠಾ ಕಾಲದಲ್ಲಿ ಮದ್ರಾಸು ಸಿಟಿ ಅಡಿಯಾರ್‌ನ ಶ್ರೀ ಅನಂತಪದ್ಮನಾಭ ಸ್ವಾಮಿ ದೇವಾಲಯದ ಮುಖ್ಯ ಧರ್ಮದರ್ಶಿಗಳಾದ

ಶ್ರೀಯುತ ಎ.ಆರ್. ನಾರಾಯಣಚಾರ್ಯ ಮತ್ತು ಗುಂಟೂರು ನರಸಿಂಹರಾವು ಶ್ರೀಯುತ ವೀರಪ್ಪ ಚೆಟ್ಟಿಯಾರ್, ಶ್ರೀಯುತ ಸುಬ್ರಹ್ಮಣ್ಯಂ ಮುಂತಾದವರು ಶಿಲ್ಪಿಗಳಿಗೆ ಬಂಗಾರದ ಪದಕವನ್ನು ಮತ್ತು ಪಟ್ಟು ವಸ್ತ್ರಗಳನ್ನು ಕೊಟ್ಟು ಸನ್ಮಾನಿಸಿದರು.

ಅದೇ ಸಂದರ್ಭದಲ್ಲಿ ಮದ್ರಾಸ್ ಸಿಟಿ ಮೈಲಾಪುರಂ ಶ್ರೀ ಕಪಾಲೇಶ್ವರ ದೇವಾಲಯದ ಅನತಿ ದೂರದಲ್ಲಿರುವ ಚಿತ್ರಕೊಳಂ ಶ್ರೀ ಶಂಕರಾಲಯಕ್ಕೆ ಶ್ರೀ ಶಂಕರಾಚಾರ್ಯರು ರಾಜರಾಜೇಶ್ವರಿ ಅಮೃತ ಶಿಲಾಮೂರ್ತಿಗಳನ್ನು ಈ ಶಿಲ್ಪಿಗಳು ಕೊಟ್ಟಿರುತ್ತಾರೆ. ಇವುಗಳು ಈಗಲು ಅನನ್ಯವಾಗಿ ಪೂಜೆ ಹೊಂದುತ್ತಿವೆ. ಮದ್ರಾಸಿನ ಐ.ಐ.ಟಿಗೆ ಶ್ರೀ ಜಲಕಂಠೇಶ್ವರ ದೇವಾಲಯಕ್ಕೆ ದಂಡಪಾಣಿ, ಸುಬ್ರಹ್ಮಣ್ಯ, ಗಣಪತಿ, ಪಾರ್ವತಿ, ದಕ್ಷಿಣಾಮೂರ್ತಿ, ಬ್ರಹ್ಮದೇವರು ಮತ್ತು ನಾರಾಯಣ ಚಂಡಿಕೇಶ್ವರ ಮೂರ್ತಿಗಳನ್ನು ಈ ಶಿಲ್ಪಿಗಳು ಮಾಡಿಕೊಟ್ಟಿರುತ್ತಾರೆ.

ಕೇಂದ್ರ ಸರ್ಕಾರದ ಪ್ರಾಚ್ಯ ವಸ್ತು ಇಲಾಖೆ ದಕ್ಷಿಣ ವಲಯದ ಮುಖ್ಯ ಅಧಿಕಾರಿಗಳಾಗಿದ್ದ ಶ್ರೀಯುತ ಎಸ್.ಆರ್. ರಾವ್‌ರವರು ಒಮ್ಮೆ ಶಿವಾರ ಪಟ್ಟಣಕ್ಕೆ ಭೇಟಿ ಇತ್ತು ಶ್ರೀ ಉಡುಪಿ ಕೃಷ್ಣದೇವರ ಬಗ್ಗೆ ಶಾಸ್ತ್ರ ಸಮ್ಮತವಾದ ದ್ಯಾನಾದಾರಗಳನ್ನು ಶಿಲ್ಪಿಗಳಿಂದ ತಿಳಿದ ನಂತರ ಅವರು ಈಗ ನವದೆಹಲಿಯ ಸಫ್‌ದರ್‌ಜಂಗ್, ಎನ್‌ಕ್ಲೇವ್‌ನಲ್ಲಿ ಪ್ರತಿಷ್ಠಾಪಿಸಿರುವ ಶ್ರೀ ಉಡುಪಿ ಕೃಷ್ಣದೇವರನ್ನು ಸಾಲಿಗ್ರಾಮ ಕೃಷ್ಣಶಿಲೆಯಲ್ಲಿ ಶಿಲ್ಪಿ ಚನ್ನಪ್ಪಯ್ಯಾಚಾರ್ಯರಿಂದ ತಯಾರಿಸಿಕೊಟ್ಟು ಕೀರ್ತಿಯನ್ನು ಗಳಿಸಿರುತ್ತಾರೆ.

ಶಿಲ್ಪಿ ಚಿನ್ನಪ್ಪಯ್ಯಾಚಾರ್ಯರು ಹಿಮಾಲಯದ ಹೃಷಿಕೇಶಕದಲ್ಲಿ ಆಂಧ್ರಾಶ್ರಮವೆಂದು ಪ್ರಸಿದ್ಧವಾದ ಸ್ಥಳವಿರುತ್ತೇ, ಈ ಪುಣ್ಯಕ್ಷೇತ್ರದ ರೂವಾರಿ ಶ್ರೀ ಸ್ವಾಮಿ ಸಚ್ಚಿದಾನಂದ ಸರಸ್ವತಿಯವರಿಗೆ ೧೯೬೩ರಲ್ಲಿ ಶ್ರೀ ಪೂರಿ ಜಗನ್ನಾಥ ಶ್ರೀ ವೃಕ್ಷವ ಗುರುಗಳಿಂದ ತಿರುಮಲ ಪೆದ್ದಿಂಟಿ ಸಂಪತ್ಕುಮಾರ ವೆಂಕಟಾಚಾರ್ಯ ಅಯ್ಯವಾರಲಂಗಾರ್ಲು ಇವರ ಸಲಹೆಯಂತೆ ಶಿಲ್ಪ ಶಾಸ್ತ್ರ ಸಮ್ಮತವಾಗಿ ಶ್ರೀ ನಾರಾಯಣ ಮಂದಿರಕ್ಕೆ ಬೇಕಾದ ವಿಷ್ಣು ಸಂಪುಟ ಮೂರ್ತಿಗಳು ಮತ್ತು ಶ್ರೀ ಚಂದ್ರ ಮೌಳೇಶ್ವರ ದೇವಾಲಯಕ್ಕೆ ಬೇಕಾದ ಶಿವಸಂಪುಟ ಶಿಲಾ ಮತ್ತು ಉತ್ಸವ ಮೂರ್ತಿಗಳು ಮತ್ತು ಅನಂತಪದ್ಮನಾಭ ಸ್ವಾಮಿ ಮತ್ತು ಅಮೃತಶಿಲೆಯ ಮಹಾಲಕ್ಷ್ಮಿ ಅಮ್ಮನವರು ಮುಂತಾದ ೪೮ ಮೂರ್ತಿಗಳನ್ನು ಸುಂದರವಾಗಿ ಶ್ರೀ ಚಿನ್ನಪಯ್ಯಾಚಾರ್ಯರು ಮಾಡಿಕೊಟ್ಟ ಈ ಮೂರ್ತಿಗಳು ಆಗಿನ ಭಾರತ ದೇಶದ ರಾಷ್ಟ್ರಪತಿಗಳಾದ ಶ್ರೀಯುತ ಸರ್ವೇಪಲ್ಲಿ ರಾಧಾಕೃಷ್ಣನ್‌ರವರ ಅಧ್ಯಕ್ಷತೆಯಲ್ಲಿ ಪ್ರತಿಷ್ಠಾ ಕಾರ್ಯವು ನೆರವೇರಿಸಲ್ಪಟ್ಟಿದೆ. ಇವರಿಗೆ ಶ್ರೀ ರಾಷ್ಟ್ರಪತಿಗಳು ಸನ್ಮಾನಿಸಿರುತ್ತಾರೆ. ಇವರ ಬಳಿ ಶಿವಾರ ಪಟ್ಟಣದ ಅನೇಕರು ಶಿಲ್ಪಕಲೆ ಕಲಿತ್ತಿದ್ದಾರೆ.

ಆನಂತರ ಶಿಲ್ಪಿ ಚಿನ್ನಪ್ಪಯ್ಯಾಚಾರ್ಯರು ಭಾರತದೇಶದ ರಾಜಧಾನಿ ನವದೆಹಲಿಯ ಕೈಗಾರಿಕಾ ಅಭಿವೃದ್ಧಿ ಮಂಡಲಿಯ ಸಲಹಾ ಸಮಿತಿ ಸದಸ್ಯರಾಗಿ ಆಯ್ಕೆಯಾದರು. ಅವರು ಕೇಂದ್ರದ ಕೈಗಾರಿಕಾ ಅಭಿವೃದ್ಧಿ ಮಂಡಲಿಯ ಅಧ್ಯಕ್ಷರಾಗಿದ್ದ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯರನ್ನು ಶಿವಾರಪಟ್ಟಣಕ್ಕೆ ಭೇಟಿ ನೀಡಲು ಭಿನ್ನವಿಸಿದಾಗ ಅವರು ಶಿವಾರ ಪಟ್ಟಣಕ್ಕೆ ಬಂದು ಶಿಲ್ಪಕಲೆಯನ್ನು ಸನಾತನ ಸಂಪ್ರದಾಯದಿಂದ ಬಂದಿರುವ ಕಲೆಯನ್ನು ಆಧುನಿಕ ರೀತಿಯಲ್ಲಿ ಪರಿವರ್ತಿಸಲು

ಕೇಂದ್ರ ಸರ್ಕಾರಕ್ಕೆ ಶಿಫಾರಸು ಮಾಡಿದರು. ಆನಂತರ ಕೇಂದ್ರ ಸರ್ಕಾರದ ಕೈಗಾರಿಕಾ ಯೋಜನ ಮತ್ತು ಅಭಿವೃದ್ಧಿ ಮಂತ್ರಿಗಳಾಗಿ ಹೆಸರು ಗಳಿಸಿದ ಶ್ರೀಯುತರಾದ ಎಸ್.ಕೆ.ಡಿ.ಡೇ ಅವರು ಶಿವಾರಪಟ್ಟಣ ಗ್ರಾಮಕ್ಕೆ ಭೇಟಿನೀಡಿ, ಶಿಲ್ಪಿ ಚಿನ್ನಪಯ್ಯಾಚಾರ್ಯರಿಂದ ಶಿಲ್ಪ ಶಾಸ್ತ್ರದ ವಿವಿಧ ಪ್ರಕಾರಗಳು ಪುರಾತನ ಶಿಲ್ಪಿಗಳಿಂದ ಅನೂಚಾನವಾಗಿ ಬಂದ ರೀತಿ, ನೀತಿಗಳನ್ನು ತಿಳಿದು ಆಶ್ಚರ್ಯಗೊಂಡು ತಾವು ಕೇಂದ್ರ ಸರ್ಕಾರದಿಂದ ಈ ಶಿಲ್ಪ ಕಲೆಯನ್ನು ಆಧುನೀಕರಿಸಲು ವಿವಿಧ ರೀತಿಯ ನೂತನ ಯಂತ್ರೋಪಕರಣಗಳನ್ನು ಸಾರ್ವಜನಿಕ ಯಂತ್ರಗಾರ ಮತ್ತು ಇವುಗಳನ್ನು ಸ್ಥಾಪಿಸಲು ಒಂದು (ಕಾಮನ್ ವರ್ಕಷೆಡ್) ಕಟ್ಟಡಕ್ಕೆ ಅನುದಾನವನ್ನು ನೀಡಿದರು. ಈ ಮಹತ್ ಕಾರ್ಯವನ್ನು ಈ ಶಿಲ್ಪಿವರ್ಯರು ಶಿಲ್ಪಕಲಾ ಸಹಕಾರ ಸಂಘ ಸ್ಥಾಪನೆ ಮಾಡಿದರು, ಶಿವಾರಪಟ್ಟಣದಲ್ಲಿನ ಶಿಲ್ಪ ಸಂಕುಲಕ್ಕೆ ಈ ಸಂಘದ ಕಟ್ಟಡ ಮತ್ತು ಯಂತ್ರೋಪಕರಣಗಳಿಂದ ಮಹದುಪಕಾರವನ್ನು ಮಾಡಿ ಕೀರ್ತಿಗಳಿಸಿದ್ದಾರೆ.

ಶಿಲ್ಪಿ ಚಿನ್ನಪ್ಪಯ್ಯಾಚಾರ್ಯರು ಪೂರ್ವತಹ ಎಳಚಳ್ಳಿಯಿಂದ ಶಿವಾರಪಟ್ಟಣಕ್ಕೆ ಆದಿ ಶಿಲ್ಪಿಗಳಾಗಿ ಬಂದ ಶಿಲ್ಪಿ ಬಸವಲಿಂಗಾಚಾರ್ಯರ ಮನೆತನದ ಮುಖ್ಯ ಗಣ್ಯವ್ಯಕ್ತಿಗಳು. ಶಿಲ್ಪಿ ಬಸವ ಲಿಂಗಾಚಾರ್ಯರು ಕರ್ಣಾಟಕ ರಾಜ್ಯವಾಳುತ್ತಿದ್ದ ೭ನೆಯ ಗಂಗರಸರ ಕಾಲಕ್ಕೆ ಸೇರಿದವರು. ಈ ಅರಸರು ಶಿಲ್ಪಿಗಳಿಗೆ ಬಳುವಳಿಯಾಗಿ ಕೊಟ್ಟ ಹೊಲ, ಗದ್ದೆ, ಮತ್ತು ಮನೆಯ ವಠಾರ ಮುಂತಾದ ಪೂರ್ವಜರ ಮಾನ್ಯವನ್ನು ಶಿಲ್ಪಿ ಚನ್ನಪ್ಪಯ್ಯಾಚಾರ್ಯರು ಮತ್ತು ಅವರ ವಂಶಸ್ಥರು ಅನುಭವಿಸುತ್ತಿದ್ದಾರೆ.

ಕರ್ನಾಟಕ ಸರ್ಕಾರವು ಇವರ ಕಲಾಸಾಧನೆ ಮತ್ತು ಶಿಲ್ಪಕಲಾ ನೈಪುಣ್ಯತೆಯನ್ನು ಮೆಚ್ಚಿ ೧೯೬೯ರಲ್ಲಿ ಮರಣೋತ್ತರ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಇವರು ೧೯೬೮ರಲ್ಲಿ ನಿಧನ ಹೊಂದಿದರು.



# ಎ. ರುದ್ರಾಚಾರ್ಯರು

ಎ. ವಿ. ಚಂದ್ರಮೂರ್ತಿ

ಶಿಲ್ಪಿ ರುದ್ರಾಚಾರ್ಯರು ಅಜ್ಜೀಹಳ್ಳಿ ಶಿಲ್ಪಿ ಚೆನ್ನ ವೀರಾಚಾರ್ಯರು ಮತ್ತು ಕಾಳಮ್ಮನವರ ಎರಡನೆಯ ಮಗನಾಗಿ ೧೯೧೦ರಲ್ಲಿ ಹೊದಿಗೆರೆಯಲ್ಲಿ ಜನಿಸಿದರು. ಇವರು ೯ನೇ ತರಗತಿಯವರೆಗೆ ವ್ಯಾಸಂಗ ಮಾಡಿದರು. ಮುಂದೆ ಬಡತನದಿಂದ ವ್ಯಾಸಂಗ ಮಾಡಲು ಸಾಧ್ಯವಾಗದೇ ವಂಶ ಪಾರಂಪರ್ಯವಾಗಿ ಬಂದಂತಹ ಶಿಲ್ಪಕಲೆಯ ಕಡೆ ಮನಸ್ಸು ತಿರುಗಿತು. ತಂದೆ ಶಿಲ್ಪಿ ಚೆನ್ನ ವೀರಾಚಾರ್ಯರು ಮತ್ತು ಚಿಕ್ಕಪ್ಪ ನಾಗೇಂದ್ರ ಚಾರ್ಯ, ಮಾವನವರ ಮಾರ್ಗದರ್ಶನದಲ್ಲಿ, ಶಾಸ್ತ್ರೀಯವಾಗಿ ಕಲೆ, ಲೋಹ, ಮರದ ಮಾಧ್ಯಮಗಳಲ್ಲಿ ಪರಿಣಿತರಾದರು. ಇವರು ಮೈಸೂರು ಜಯಚಾಮರಾಜೇಂದ್ರ ಒಡೆಯರ್‌ರವರ ಮನೆ ದೇವರಾದ ಮೈಷಾಸುರ ಮರ್ದಿನಿ ದೇವಾಲಯಕೆ ಶಿಲ್ಪಶಾಸ್ತ್ರಿ ನಾಗೇಂದ್ರಚಾರ್ಯರ ಜೊತೆಯಲ್ಲಿ ಮತ್ತು ತಮ್ಮಂದಿರೊಂದಿಗೆ ಒಂದು ವರ್ಷ ಕೆಲಸ ಮಾಡಿದ್ದಾರೆ.

ಇವರು ಪ್ರಾಪ್ತ ವಯಸ್ಸಿನಲ್ಲಿ ಚೆನ್ನಗಿರಿ ತಾಲ್ಲೂಕು ಗೊಪ್ಪೇನಹಳ್ಳಿಯ ಬಸವಚಾರ್ಯರ ಮಗಳಾದ ಶಿವಪುತ್ರಮ್ಮನವರನ್ನು ವಿವಾಹವಾದರು. ಶಿಲ್ಪಿ ರುದ್ರಾಚಾರ್ಯರು ಮತ್ತು ಶಿವಪುತ್ರಮ್ಮನವರುಗಳಿಗೆ ನಾಲ್ಕು ಜನ ಹೆಣ್ಣು ಮಕ್ಕಳು ಮತ್ತು ಇಬ್ಬರು ಗಂಡು ಮಕ್ಕಳು. ೧೯೫೭ರಲ್ಲಿ ದಾವಣಗೆರೆ ತಾಲ್ಲೂಕು ಲೋಕಿಕೆರೆ ಗ್ರಾಮಕ್ಕೆ ಶ್ರೀ ಆಂಜನೇಯಸ್ವಾಮಿ ದೇವಸ್ಥಾನಕ್ಕೆ, ಮರದ ರಥ ರಚಿಸಿದ್ದಾರೆ. ಅಣ್ಣ ಈಶ್ವರಾಚಾರ್ಯರು, ತಮ್ಮಂದಿರಾದ ಭುಜಂಗಾಚಾರ್ಯರು, ನಾಗೇಂದ್ರ ಚಾರ್ಯರುಗಳ ಜೊತೆಯಲ್ಲಿ ಒಂದು ವರ್ಷದ ಕಾಲಾವಧಿಯಲ್ಲಿ ರಥ ತಯಾರಿಸಿರುತ್ತಾರೆ.

ಕೂಡ್ಲಿ ಮತ್ತು ಕೃಷ್ಣರಾಜು ಪುರಕ್ಕೆ ಚಿಕ್ಕಮಗಳೂರು ಜಿಲ್ಲೆ ಶಿವನೆಗೆಗೆ ಮರದ ರಥವನ್ನು ರಚಿಸಿದ್ದಾರೆ. ಅಲ್ಲದೆ ಶಿವಮೊಗ್ಗ ನಗರದ ಕನ್ನಿಕಾಪರಮೇಶ್ವರಿ ದೇವಸ್ಥಾನಕ್ಕೆ ಮರದ ಕಲ್ಯಾಣ ಮಂಟಪ, ಚಿತ್ರದುರ್ಗ ಹಿರಿಯೂರಿಗೆ ನವಗ್ರಹಗಳನ್ನು, ಬೀರೂರಿಗೆ ಕನ್ನಿಕಾಪರಮೇಶ್ವರಿ ವಿಗ್ರಹವನ್ನು, ಹೊರನಾಡು ಕಳಸಕ್ಕೆ ಮರದ ರಥಗಳನ್ನು ಮಾಡಿದ್ದಾರೆ. ಗುಬ್ಬಿ ಚೆನ್ನಬಸಪ್ಪ ದೇವಸ್ಥಾನಕ್ಕೆ ಶಿಲ್ಪಿ ವಿಶ್ವಜ್ಞ ಚಾರ್ಯರೊಂದಿಗೆ ನವರತ್ನ ಪಲ್ಲಕ್ಕಿಯನ್ನು ಗಂಧದ ಮರದಲ್ಲಿ ಬಸವಣ್ಣ, ಚೆನ್ನಬಸವಣ್ಣ, ಅಕ್ಕ ಮಹಾದೇವಿ, ನೀಲಾಂಬಿಕೆ ಮುಂತಾದ ವಿಗ್ರಹಗಳನ್ನು ರಚಿಸಿದ್ದಾರೆ.

ದಾವಣಗೆರೆ ರಾಜಗೊಂಡನಹಳ್ಳಿ ಹನುಮಂತಪ್ಪನವರ ಧರ್ಮಛತ್ರಕ್ಕೆ ಮರದ ಕಲ್ಯಾಣ ಮಂಟಪವನ್ನು ಮತ್ತು ಹೊಳಲ್ಕೆರೆ ತಾಲ್ಲೂಕು ಮಲ್ಲಾಡಿಹಳ್ಳಿ ಅನಾಥ ಸೇವಾಶ್ರಮಕ್ಕೆ ಮಂಟಪ ತಯಾರಿಸಿದ್ದಾರೆ. ಮಲೆನಾಡಿನ ಅನೇಕ ದೇವಸ್ಥಾನಗಳಿಗೆ ಮರದ ಬಾಗಿಲುಗಳನ್ನು ಮತ್ತು ಸುಳುವು ಹಾಗೂ ವಿಗ್ರಹಗಳನ್ನು ರಚಿಸಿದ್ದಾರೆ. ಇವರು ೬.೩.೧೯೮೮ರಲ್ಲಿ ದೈವಾಧೀನರಾದರು.



# ಕರವೀರಪ್ಪನವರು ಕಾಳಪ್ಪ ಯರಕದ

ಸಂಗಪ್ಪ ಫ. ಹೂಗಾರ

ವಾಸ್ತು ಶಿಲ್ಪ ಹಾಗೂ ಶಿಲ್ಪಕಲೆಯಿಂದ ಜಗತ್ತಿನ ಕಣ್ಣುಗಳನ್ನೇ ತನ್ನೆಡೆಗೆ ಸೆಳೆದ ಐತಿಹಾಸಿಕ ಸ್ಥಳಗಳಾದ ಐಹೊಳೆ, ಪಟ್ಟದಕಲ್ಲು, ಬಾದಾಮಿ ಮುಖ್ಯ ರಸ್ತೆಯಲ್ಲಿದ್ದ ಹಾಗೂ ಹಿಂದೆ ಕಾಜಿನ ಬಳೆಗೆ ಪ್ರಸಿದ್ದವೆನಿಸಿದ, ಹತ್ತಿಪ್ಪತ್ತು ಗ್ರಾಮಗಳಿಗೆ ಮದ್ಯವರ್ತಿ ಕೇಂದ್ರವೆನಿಸಿದ ಗುಡೂರ ಗ್ರಾಮ. ಈ ಗ್ರಾಮದಲ್ಲಿ ಹಲವಾರು ವಿಶ್ವಕರ್ಮ ಮನೆತನಗಳಿದ್ದು, ಇನ್ನುಳಿದವರು ಪತ್ತಾರಿಕೆ, ಕಂಚುಗಾರಿಕೆ, ಬಡಿಗತನ, ಕಮ್ಮಾರಿಕೆ, ವ್ಯಾಪರ ಉದ್ಯೋಗದಲ್ಲಿ ಕಾರ್ಯ ನಿರ್ವಹಿಸುತ್ತಿದ್ದರು. ಕಾಳಪ್ಪ ಯರಕದವರಿಗೆ ೧೯೦೭ರಲ್ಲಿ ಒಳ್ಳೇ ಸುಪುತ್ರನನ್ನು ಪಡೆದರು, ಅವರೇ ಕರವೀರಪ್ಪನವರು. ದೂರ-ದೂರದಿಂದ ಮೂರ್ತಿಗಳ ಕರೆ ಬಂದಾಗ ಕಾಳಪ್ಪನವರು ತಮ್ಮ ವೃತ್ತಿಯಾದ ಶಿಲ್ಪ ಕಲೆಯಲ್ಲಿ ಶುಚಿರ್ಭುತರಾಗಿ ಏಕಚಿತ್ತದಿಂದ ಕೆಲಸ ಮಾಡುತ್ತಿರುವುದನ್ನು ಮಕ್ಕಳಾದ ಕಾಶಪ್ಪ-ಕರವೀರಪ್ಪ-ಕಾಕೇಂದ್ರಪ್ಪ ಇವರು ಸದಾ ಆಲಿಸುತ್ತಿದ್ದರು. ತಾಯಿ ಮಕ್ಕಳನ್ನು ತಿದ್ದಿ ಬೆಳೆಸುವ ಹಾಗೆಯೇ ಶಿಲಾ ವಿಗ್ರಹಗಳು ರೂಪುಗೊಳ್ಳಬೇಕೆನ್ನುವ ಕರವೀರಪ್ಪ ಶಿಲ್ಪಿಗಳು ಹುಟ್ಟಿದ್ದು ಹುನಗುಂದ ತಾಲ್ಲೂಕ ಗುಡೂರ ಗ್ರಾಮದಲ್ಲಿ. ಶಾಲೆಯನ್ನು ಕಲಿತದ್ದು ಸ್ವಲ್ಪ. ಮೂರ್‍ನಾಲ್ಕು ತಲೆಮಾರಿನಿಂದಲೂ ರಕ್ತಗತವಾಗಿ ಹರಿದು ಬಂದ ಕಲೆಯಿಂದಾಗಿಯೋ ಏನೋ ಈ ವಂಶದ ಹತ್ತು ವರ್ಷದ ಚಿಕ್ಕ ಮಕ್ಕಳ ಕೈಯಲ್ಲಿ ಚಾಣ (ಉಳಿ) ಹೇಳಿದಂತೆ ಕುಣಿಯುತ್ತದೆ. ಮೂರ್ತಿ ಶಿಲ್ಪಿ ಶ್ರೇಷ್ಠರಾದ ಇವರ ತಂದೆ ಕಾಳಪ್ಪನವರು ಶಿಲಾ ಹೃದಯವನ್ನರಿತು ಶಿಲ್ಪದಲ್ಲಿ ಆತ್ಮಾನಂದ ಕಂಡವರು. ಇವರ ಮೂರ್ತಿ ಶಿಲ್ಪದ ಗುಣಮಟ್ಟದ ಬಗೆಗೆ ಚೌಕಾಶಿ ಇಲ್ಲ. ಶ್ರೇಷ್ಠತೆಯ ಬಗ್ಗೆ ಸಂಶಯವೇ ಇದ್ದಿಲ್ಲವಂತೆ. ಇಂಥ ಅಪೂರ್ವ ಕಲಾವಿದರ ರಕ್ತ ಹಂಚಿಕೊಂಡು ಬಂದ ಕರವೀರಪ್ಪನವರು ತಂದೆಗೆ ತಕ್ಕ ಮಗನಾಗಲು ಆ ದಿಶೆಯಲ್ಲಿ ಮುನ್ನಡೆಯುತ್ತಿದ್ದರಂತೆ. ಸಾಮಾನ್ಯ ಕಲ್ಲಲ್ಲಿ ಅಸಾಧಾರಣ ಕಲಾ ನೈಪುಣ್ಯ ತೋರಿಸುವ ಈ ಶಿಲ್ಪಿಯ ಕೈಯಲ್ಲಿ ಶೆಲ್ಲಿಕೇರಿಯ ಕಾಡು ಕರಿಗಲ್ಲು ಕಲೆಯಾಗಿ ಕೊನರುತ್ತಿತ್ತಂತೆ. ಇವರು ತಮ್ಮ ಕಿರಿಯ ಹಾಗೂ ಹಿರಿಯ ಸಹೋದರರೊಂದಿಗೆ ಹಲವಾರು ದೇವಸ್ಥಾನಗಳಿಗೆ ಮೂರ್ತಿ ತಯಾರಿಸಿ ಕೊಟ್ಟದ್ದುಂಟ್ಟು. ಮೇಣೆದಾಳಿಗೆ ರಾಘವೇಂದ್ರ ವೃಂದಾವನ, ಹೂನೂರಿಗೆ ತಿಮ್ಮಮ್ಮ ವೃಂದಾವನ, ತಾವರೆಗೆರೆಗೆ ಶ್ರೀ ನೀಲಕಂಠೇಶ್ವರ, ಮೆಣಸಗಿಗೆ ಶ್ರೀವೀರಭದ್ರದೇವರ ಮೂರ್ತಿ, ಹೆಬ್ಬಳ್ಳಿಗೆ ಶ್ರೀ ವೀರಭದ್ರದೇವರ ಮೂರ್ತಿ, ಅಮೀನಗಡದ ಶ್ರೀ ಬನಶಂಕರಿದೇವಿ ಮೂರ್ತಿ, ನಂದವಾಡಗಿ ಚೌಡೇಶ್ವರಿ ಮೂರ್ತಿ, ಇಲಕಲ್ಲ ಕಾಳಮ್ಮ ಮೂರ್ತಿ, ಮುಧೋಳದಲ್ಲಿ ಬಸವಣ್ಣ-ಈಶ್ವರ ಮೂರ್ತಿ, ಮೈಸೂರ ಮಹಾರಾಜರ ಮೂರ್ತಿಯನ್ನು ನಿರ್ಮಿಸಿ ಶ್ರೀ ದೇವರಾಜ ಅರಸರಿಗೆ ನೀಡಿದ್ದು,

ಬಾಗಲಕೋಟೆಯ ಸರ್ ಶಂಕರಪ್ಪನವರ ಮೂರ್ತಿ, ಸುಕ್ಷೇತ್ರ ಸಿದ್ದನಕೊಳ್ಳದಲ್ಲಿ ಶ್ರೀ ಕನ್ನಿಕಾ ಪರಮೇಶ್ವರಿ, ಅಲ್ಲದೆ ಹೊರರಾಜ್ಯಗಳಲ್ಲಿಯೂ ಕೂಡಾ ಇವರ ಮೂರ್ತಿಗಳು ಪ್ರಚಾರದಲ್ಲಿವೆ. ಕಲ್ಲಿನ ಮೂರ್ತಿ ತಯಾರಾದ ಕೂಡಲೇ ಈಗ ಕೆಲವರು ವ್ಯಾಪಾರದ ಕರಿ ಆಯಿಲ್‌ಪೇಂಟ ಉಪಯೋಗಿಸಿ ಸೈ ಎನಿಸಿಕೊಂಡರೆ ಯರಕದವರು ಆಗ ಸ್ವತಃ ತಾವೇ ಕಷ್ಟಪಟ್ಟು ಕೇರು-ಕುಳ್ಳು ಇನ್ನಿತರ ಸಾಮಾನುಗಳನ್ನು ಉಪಯೋಗಿಸಿ ಕೇರಣ್ಣೆ ತಯಾರಿಸಿ ಮೂರ್ತಿಗೆ ಲೇಪಿಸಿದರೆ ಆ ಮೂರ್ತಿಯ ತೇಜಸ್ಸನ್ನು ಸ್ವತಃ ನೋಡಿಯೇ ಆನಂದಿಸಬೇಕು, ಇಂತಹ ಕಲಾ ಪ್ರೌಢಿಮೆಯನ್ನು ಯರಕದವರು ಶಿಲ್ಪಕಲೆಯಲ್ಲಿ ಸಾಧಿಸಿಕೊಂಡಿದ್ದರು.

ಈ ಭಾಗದಲ್ಲಿ ಅವರನ್ನು ಆಗ ಸರಿಗಟ್ಟುವವರಿದ್ದಿಲ್ಲ. ಈಗಾದರೂ ಕರವೀರಪ್ಪನವರ ಮಗ ಶ್ರೀ ರಾಮಚಂದ್ರಪ್ಪನು ಕಾಳಪ್ಪ-ನಾಗಪ್ಪ ಎಂಬ ಮಕ್ಕಳೊಂದಿಗೆ ತಂದೆಯ ಕಲೆಯನ್ನೇ ಮುಂದುವರೆಸಿಕೊಂಡು ಹೋದರೆ ಯರಕದವರ ಅಣ್ಣನ ಮಗನಾದ ಷಣ್ಮುಖಪ್ಪನೂ ಕೂಡಾ ಇಲಕಲ್ಲದ ಚಾಲುಕ್ಯ ಶಿಲ್ಪ ಕಲಾಮಂದಿರದಲ್ಲಿ ತನ್ನ ಮಗ ಮೌನೇಶನೊಂದಿಗೆ ತಮ್ಮ ಚಿಕ್ಕಪ್ಪನ ಕಲೆಯಲ್ಲಿಯೇ ನೈಪೂಣ್ಯತೆ ತೋರಿಸಿ ಕರ್ನಾಟಕ ಸರಕಾರದಿಂದ ರಾಜ್ಯೋತ್ಸವ ಪ್ರಶಸ್ತಿ ಅಲ್ಲದೆ ಇದೇ ವರ್ಷದಿಂದ ರಾಜ್ಯ ಶಿಲ್ಪಕಲಾ ಅಕಾಡೆಮಿಯ ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿರುವುದು ವಿಶ್ವಕರ್ಮ ಸಮಾಜಕ್ಕೆ ಯರಕದವರ ದೊಡ್ಡ ಕೊಡುಗೆ ಎಂದರೆ ತಪ್ಪಾಗಲಿಕ್ಕಿಲ್ಲ.

**ಸಂಗೀತ ಕ್ಷೇತ್ರದಲ್ಲಿ:**

ಯರಕದವರು ಮೂಲವೃತ್ತಿ ಶಿಲ್ಪ ಕೆಲಸವನ್ನೂ ಬಿಡದೇ ಹವ್ಯಾಸಿ ಎಂದು ಸಂಗೀತ ಕಲೆಯನ್ನು ತನ್ನ ಮೂರ್‍ನಾಲ್ಕು ಜನ ಸಹ ಕಲಾವಿದರೊಂದಿಗೆ ಸಂಗೀತ ಜ್ಞಾನಿ ಶಿರೋಳದ ನೀಲಪ್ಪನವರಿಂದ ಒಳ್ಳೇ ಭಯ ಭಕ್ತಿಯಿಂದ ಸಂಗೀತ ಕಲೆಯನ್ನು ಶಾಸ್ತ್ರೋಕ್ತವಾಗಿ ರೂಢಿಸಿಕೊಂಡರು. ಜನಪದ ಕಲೆಗಳಾದ ಭಜನೆಯಿಂದ ಹಿಡಿದು ಶಾಸ್ತ್ರೀಯ ಸಂಗೀತದವರೆಗೂ ಚಾಚೂ ತಪ್ಪದೇ ಕರಗತಮಾಡಿಕೊಂಡಿದ್ದರು. ಸಂಗೀತದಲ್ಲಿ ಏಳು ತಾಳಗಳು ಪ್ರಮುಖವಾಗಿದ್ದು ಅವುಗಳ ಸೂಕ್ತ ಪರಿಚಯವನ್ನು ಮಾಡಿಕೊಂಡರು.

ರೋಣಾ ತಾಲ್ಲೂಕಿನ ಮಣಸಣಗ್ರಾಮಕ್ಕೆ ಶ್ರೀ ವೀರಭದ್ರದೇವರ ಮೂರ್ತಿ ತಯಾರಿಸಲಿಕ್ಕೆ ಹೋದಾಗ ಮೂರ್ತಿಯ ಕೆಲಸ ಮಾಡುತ್ತ ಅಲ್ಲಿಯೇ ಜಾನಪದ ಕಲೆ ಕರಡಿಮಜಲು ಕಲಾವಿದರನ್ನೂ ತಯಾರು ಮಾಡಿದರು. ಆಗಿನ ಕೆಲವೊಂದು ಐತಿಹಾಸಿಕ ಪೌರಣಿಕ ನಾಟಕಗಳಿಗೆ ಮದ್ದಳೆ ವಾದ್ಯದ ಸಾಥನ್ನೂ ಕೂಡಾ ನೀಡುತ್ತಿದ್ದರಂತೆ. ಜೀವನದಲ್ಲಿ ಒಬ್ಬ ಕಲಾವಿದ ಒಂದು ಕಲೆಯಲ್ಲಿ ಬೇಕಾದಷ್ಟೂ ಹೆಸರುಗಳಿಸಬಹುದು. ಆದರೆ ಯರಕದವರು ಪಂಚಮಹಾವಿದ್ಯೆಗಳಲ್ಲಿ ಪರಿಣತಿ ಪಡೆದಿರುವುದು ಅವರಿಗೆ ದೇವರು ನೀಡಿದ ವರವೇ ಆಗಿತ್ತು. ಯರಕದವರು ಜ್ಯೋತಿಷ್ಯ ಶಾಸ್ತ್ರವನ್ನು ರೋಣ ತಾಲೂಕಿನ ಮೆಣಸಗಿ ಗ್ರಾಮದ ಸುಪ್ರಸಿದ್ಧ ಜ್ಯೋತಿಷ್ಯರಾದ ವೇ. ವಿರಪಾಕ್ಷಯ್ಯ ಸ್ವಾಮಿಗಳಿಂದ ಸಂಪೂರ್ಣವಾಗಿ ಅಭ್ಯಾಸಿಸಿಕೊಂಡರು. ನಂತರ ಗುಡೂರ ಗ್ರಾಮದ ಸುತ್ತಮುತ್ತಲು ಗ್ರಾಮಗಳ ಕೃಷಿಕರು, ವ್ಯಾಪಾರಸ್ಥರು, ಕೂಲಿಗಾರರು ತಮ್ಮ ತಮ್ಮ ವಿಚಾರಗಳನ್ನು ಯರಕದವರಲ್ಲಿ ಕೇಳಲು

ಬಂದಾಗ ಅವರಿಗೆ ಸಮರ್ಪಕವಾದ ಸೂಕ್ತ ವಿಚಾರಗಳನ್ನು ಹೇಳಿ ಸೈ ಎನಿಸಿಕೊಂಡಿದ್ದರು. ಕೆಲವೊಮ್ಮೆ ದೊಡ್ಡಮನೆತನಗಳು ಕಳವು ಆದಾಗ, ಸರಿಯಾದ ವೇಳೆಯಲ್ಲಿ ಹೇಳಿದರೆ ಅದಕ್ಕೆ ಸರಿಯಾಗಿ ಇಂತಹ ಬಣ್ಣದವರು, ಇಷ್ಟು ವಯಸ್ಸಿನವರು, ಇಂತಹ ದಿಕ್ಕಿಗೆ ತೆಗೆದುಕೊಂಡು ಹೋಗಿದ್ದಾರೆಂದು ಖಚಿತಪಡಿಸುತ್ತಿದ್ದರು. ಇತ್ತಿತ್ತಲಾಗಿ ಇಂತಹ ವಿಷಯಗಳನ್ನು ಹೇಳುವುದನ್ನು ಕಡಿಮೆ ಮಾಡಿದರಂತೆ. ಆಗಾಗ್ಗೆ ಗ್ರಾಮೀಣ ಪ್ರದೇಶಗಳನ್ನು ಶ್ರಾವಣಮಾಸದ ಸೋಮವಾರಗಳಲ್ಲಿ ಹವ್ಯಾಸಿಗೆಂದು ಬಯಲು ಕುಸ್ತಿಗಳನ್ನು ಏರ್ಪಡಿಸುತ್ತಿದ್ದರು. ಕುಸ್ತಿಯ ಪವಾಡಗಳು ಯರಕದವರನ್ನು ಕೇಳಿದಾಗ ನೀವು ಇಂತಹ ದಿಕ್ಕಿಗೆ ಮುಖ ಮಾಡಿ ಕುಳಿತುಕೊಳ್ಳಿರಿ ಅಂತಾ ಹೇಳಿದಾಗ ಅವರವರ ಕುಸ್ತಿಗಳು ಯಶಸ್ವಿ ಯಾಗುತ್ತಿದ್ದವಂತೆ. ಇಂತಹ ನೂರಾರು ಸಮಸ್ಯೆಗಳನ್ನು ಜನರು ಇವರ ಮುಂದೆ ಪ್ರಸ್ತಾಪಿಸಿದಾಗ ಅವರೆಲ್ಲರಿಗೂ ಸಮಂಜಸವಾದ ಹೇಳಿಕೆ ನೀಡಿ ಜನಾನುರಾಗಿಯಾಗಿದ್ದರು.

**ಬಡಿಗತನ:**

ಯರಕದವರು ಕಟ್ಟಿಗೆಯ ಕಲಸಮಾಡುವುದರಲ್ಲಿ ಪ್ರವೀಣರಾಗಿದ್ದರು. ೧೯೫೫ರ ಸುಮಾರಿಗೆ ಹುನಗುಂದ ತಾಲ್ಲೂಕ ಕೋಲಾರ ಗ್ರಾಮದ ಶ್ರೀಗುರುಮಂಟೇಶ್ವರ ರಥವನ್ನು ನಿರ್ಮಿಸುವುದರಲ್ಲಿ ಸಂಗಮದ ಗಂಗಪ್ಪ ಬಡಿಗೇರ, ಕುಷ್ಣಾಪುರದ ಬಸಪ್ಪ ಬಡಿಗೇರ, ಕಾಳಪ್ಪ ಬಡಿಗೇರ ಇವರೆಲ್ಲರನ್ನು ಸೇರಿಸಿಕೊಂಡು ಎರಡು ವರ್ಷಗಳ ವರೆಗೆ ಅದ್ಭುತವಾದ ತೇರನ್ನೂ ತಯಾರ ಮಾಡಿದ್ದು ಅಂತಹ ನಕ್ಷೆ ಕುಸುರಿನ ಕೆಲಸ ಮತ್ತೊಂದು ತೇರಿನಲ್ಲಿಲ್ಲ. ನಾಡಿನ ಹಲವಾರು ಶಿವಶರಣರ ಮೂರ್ತಿಗಳನ್ನು ನೋಡಬಹುದು. ಒಬ್ಬ ಕಲಾವಿದನ ಕೆಲಸ ಮತ್ತೊಬ್ಬರ ಅಂತಿಲ್ಲ. ಅಂತಹ ವಿಶಿಷ್ಟತೆಯಿಂದ ಕಟ್ಟಿಗೆಯಲ್ಲಿಯೂ ಪ್ರವೀಣತೆಯನ್ನು ತೋರಿಸಿದವರು. ಯರಕದವರೆ ತೇರನ್ನು ಕೋಲಾರ ಗ್ರಾಮದಲ್ಲಿ ತಯಾರಿಸುವಾಗಲೇ ಅಲ್ಲಿಯೇ ಒಂದು ಕರಡಿಮಜಲಿನ ಮೇಳವನ್ನು ತಯಾರು ಮಾಡಿದರು. ನಂತರ ೧೯೭೫ರಲ್ಲಿ ಕೆಲೂರಲ್ಲಿಯೇ ಮತ್ತೊಂದು ಕರಡಿಮಜಲಿನ ಮೇಳಕ್ಕೆ ಅಭ್ಯಾಸ ನೀಡಿದರು. ಆ ತಂಡವು ರಾಜ್ಯ-ಹೊರ ರಾಜ್ಯಗಳಲ್ಲಿ ಗುರುವಿನ ಆಜ್ಞೆಯಂತೆ ಕಾರ್ಯಕ್ರಮ ನೀಡಿ, ಆಕಾಶವಾಣಿ-ದೂರದರ್ಶನದಲ್ಲಿಯೂ ಕೂಡಾ ಹೆಸರುಗಳಿಸಿದ ಸಂಗಪ್ಪ ಫಕೀರಪ್ಪ ಹೂಗಾರ ತಂಡದ ಶ್ರೇಯಸ್ಸು ಯರಕದವರಿಗೆ ಸಲ್ಲಬೇಕಾದುದೆಂದು ಹೆಮ್ಮೆಯಿಂದ ಹೇಳುತ್ತಾರೆ. ಹೀಗೆ ಯರಕದವರು ಮೂರ್ತಿ ತೇರಿನ ಕೆಲಸಕ್ಕೆ ಹೋದಲ್ಲೆಲ್ಲಾ ಅಲ್ಲಿ ಶಾಶ್ವತವಾದ ತಮ್ಮ ಹೆಸರನ್ನು ಉಳಿಸಿದ್ದಾರೆ.

**ಕಂಚುಗಾರಿಕೆ:**

ವಂಶಪರಂಪರೆಯಿಂದ ಬಂದತಹ ಕಂಚಗಾರಿಕೆಯನ್ನು ಪ್ರತ್ಯೇಕವಾಗಿ ಕಲಿಯಬೇಕಾದುದೇನಿಲ್ಲ. ಹಿರಿಯರಿಂದ ಸರಾಗವಾಗಿ ಬರುವ ಕಲೆ ಇದು. ಇದರಲ್ಲಿ ತಾಮ್ರ, ಹಿತ್ತಾಳೆ, ಕಂಚು, ಬೆಳ್ಳಿ ಲೋಹಗಳಿಂದ ದೊಡ್ಡ-ದೊಡ್ಡ ದೇವಸ್ಥಾನಗಳ ಬಾಗಿಲುಗಳಿಗೆ ಕಲಾಕುಸುರಿನ ಕೆಲಸ ಅಲ್ಲದೆ ಗೋಪುರದ ಕಲಶಗಳನ್ನು ಕೊಡಾ ಯರಕದವರು ಸಾಕಷ್ಟು ದೇವಸ್ಥಾನಗಳಿಗೆ ತಯಾರು ಮಾಡಿಕೊಟ್ಟಿದ್ದಾರೆ. ಈ ಎಲ್ಲ ಕಲೆಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಯರಕದವರು ಸ್ವಲ್ಪ ವೇಳೆ

ರಾತ್ರಿ ಸಮಯ ಸಿಕ್ಕಲ್ಲಿ ಅದನ್ನು ಅಪವ್ಯಯ ಮಾಡಬಾರದೆನ್ನುವ ಉದ್ದೇಶವಾಗಿತ್ತು. ಅಂತಹ ಸಮಯದಲ್ಲಿ ಹವ್ಯಾಸಕೆಂದು ಗ್ರಾಮದ ತಮ್ಮ ಸ್ನೇಹಿತರಾದ ಸಿದ್ರಾಮಪ್ಪ ಗಂಜೀಹಾಳ, ವಿರುಪಾಕ್ಷಪ್ಪ ಶಿವಮೂರ್ತಿ, ಮಾದೇವಪ್ಪ ಆಮೀನ, ಪಿ.ಸಿ. ವಸ್ತ್ರದ, ಸೂಗಪ್ಪ ಇಲಾಳಶೆಟ್ಟರ, ವೀರಭದ್ರಪ್ಪ ಮಂತ್ರಿ, ಚಂದಪ್ಪ ಮಂತ್ರಿ, ಮೂರ್ತಿಂಡಪ್ಪ ಗದ್ದಿ, ಕಾಳಪ್ಪ ಕೇಡಗಲಿ, ಬಸಪ್ಪ ಸುರಪುರ ಇವರೆಲ್ಲರನ್ನು ಸೇರಿಸಿಕೊಂಡು ಹಿಂದೆ ಕೌರವರು-ಪಾಂಡವರು ಆಡಿದಂತ ಪಗಡಿಯಾಟವನ್ನು ಗುಂಪಿನಲ್ಲಿಯಾ ಎರಡು ಭಾಗ ಮಾಡಿ ಎದುರು-ಬದರಾಗಿ ಇಡೀ ರಾತ್ರಿಯೆಲ್ಲಾ ಆಟ ಆಡಿ ಜಯಶಾಲಿಯಾದ ಗುಂಪಿನವರು ಆನಂದ ಪಡುತ್ತಿದ್ದರು. ಹೀಗೆ ಎಲ್ಲಾ ಕಲೆಗಳಲ್ಲಿಯೂ ಯರಕದವರು ಹೆಚ್ಚಿನ ನಿಪುಣತೆಯನ್ನು ಹೊಂದಿದ್ದರಿಂದ ಈ ಭಾಗದ ಸಮಸ್ತ ಜನಕೋಟಿಗೆ ಜನಾನುರಾಗಿಯಾಗಿದ್ದರು. ಇವರು ೧೯೮೩ರಲ್ಲಿ ವಿಧಿವಶರಾದರು. ಈ ಮನೆತನದವರು ಈಗಲೂ ಕೊಡಾ ಕರವೀರಪ್ಪನವರು ಹೆಸರನ್ನು ಅಳಿಸದೇ ಹೆಚ್ಚಿನ ಸಾಹಸದಲ್ಲಿ ಮುನ್ನಡೆಯುತ್ತಿದ್ದಾರೆ.



# ಈಶ್ವರಾಚಾರ್ಯರು

ಎ. ಎ. ಚಂದ್ರಮೂರ್ತಿ

ಶಿಲ್ಪಿ ಈಶ್ವರಾಚಾರ್ಯರು ಚೆನ್ನಗಿರಿ ತಾಲ್ಲೂಕು ಅಜ್ಜಿಹಳ್ಳಿ ಗ್ರಾಮದ ಚನ್ನವೀರಾಚಾರ್ಯರು ಮತ್ತು ಕಾಳಮ್ಮನವರ ಪುತ್ರರಾಗಿ ೧೯೧೦ರಲ್ಲಿ ಜನಿಸಿದರು. ಇವರು ಬಡತನದಿಂದ ಲೋಯರ್ ಸೆಕೆಂಡರಿರವರೆಗೆ ವ್ಯಾಸಂಗ ಮಾಡಿ, ಮುಂದೆ ವ್ಯಾಸಂಗ ಮಾಡಲಾಗದೆ ವಂಶ ಪಾರಂಪರ್ಯವಾಗಿ ಬಂದಂತಹ ಶಿಲ್ಪಕಲೆಯನ್ನು ಕಲಿಯಲು ಪ್ರಾರಂಭಿಸಿದರು. ತಂದೆ ಚನ್ನವೀರಾಚಾರ್ಯರು, ಚಿಕ್ಕಪ್ಪ ನಾಗೇಂದ್ರಚಾರ್ಯ ಮತ್ತು ವಿಶ್ವಚಾರ್ಯರಲ್ಲಿ ಮತ್ತು ಅಜ್ಜನಿಂದ ಶಿಲ್ಪವನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿ, ತಮ್ಮ ಜೀವಿತದ ಕೊನೆಯವರೆಗೂ ಮರದ ರಥಗಳು ಮತ್ತು ಶಿಲಾ ವಿಗ್ರಹಗಳು, ಯರಕದ ಕೆಲಸ ಪ್ರಭಾವಳಿ ಕೆಲಸವನ್ನು ಮಾಡಿದರು.

೧೯೪೩ರಲ್ಲಿ ಮೈಸೂರು ಜಯಚಾಮರಾಜೇಂದ್ರ ಒಡೆಯರವರ ಮನೆದೇವರಾದ ಮಹಿಷಾಸುರ ಮರ್ದಿನಿ ದೇವಸ್ಥಾನಕ್ಕೆ ಮರದ ರಥ ತಯಾರಿಸಲು ನಾಗೇಂದ್ರ ಚಾರ್ಯರ ಜೊತೆಯಲ್ಲಿ ಒಂದು ವರ್ಷ ಕಾಲ ಕೆಲಸ ಮಾಡಿದ್ದಾರೆ. ಮೈಸೂರು ದಸರಾ ಕಲಾ ಪ್ರದರ್ಶನದಲ್ಲಿ ಶಿಲೆಯಲ್ಲಿ ರಚಿಸಿದ ಕೃತಿಗೆ ಪ್ರಶಸ್ತಿ ಪಡೆದರು.

ಬೇಗೂರು ಶ್ರೀ ವೆಂಕಟೇಶ್ವರ ಸ್ವಾಮಿ ದೇವಸ್ಥಾನಕ್ಕೆ ಮರದ ರಥವನ್ನು ತಮ್ಮ ತಮ್ಮಂದಿರೊಂದಿಗೆ ತಯಾರಿಸಿ 'ಶಿಲ್ಪ ವಿಶಾರದ' ಎಂಬ ಬಿರುದನ್ನು ಪಡೆದಿದ್ದಾರೆ. ಶಿಲ್ಪಕಲೆಯೇ ತಮ್ಮ ಜೀವನ ಮಾರ್ಗವೆಂದು ತಿಳಿದರು. ಇವರ ಚನ್ನಗಿರಿ ತಾಲ್ಲೂಕು ಹೊದಿಗೆರೆ ಗ್ರಾಮದ ವೀರಭದ್ರ ಚಾರ್ಯರ ಮಗಳಾದ ಲಕ್ಷ್ಮೀದೇವಮ್ಮನನ್ನು ಮದುವೆಯಾದರು.

ಇವರು ಶಿವಮೊಗ್ಗಾದ ಕನ್ನಿಕಾ ಪರಮೇಶ್ವರಿ ದೇವಸ್ಥಾನಕ್ಕೆ ಮರದ ಕಲ್ಯಾಣ ಮಂಟಪವನ್ನು ರಚಿಸಿದ್ದಾರೆ. ಹಾಗೂ ಶೃಂಗೇರಿ ಕೊಪ್ಪಕ್ಕೆ ಎರಡು ರಥ ತಯಾರಿಸಿದ್ದಾರೆ. ಅಲ್ಲದೆ ಚಿಕ್ಕಮಗಳೂರು ಜಿಲ್ಲೆ ಕೊಪ್ಪ ತಾಲ್ಲೂಕು ಬಸವನ ಕಟ್ಟೆಯಲ್ಲಿ ಮರದ ರಥವನ್ನು ಹಾಗೂ ಶಿಲೆಯಲ್ಲಿ ರಾಮ, ಲಕ್ಷ್ಮಣ, ಸೀತಾ, ಆಂಜನೇಯ ವಿಗ್ರಹಗಳನ್ನು ರಚಿಸಿ, ತಮ್ಮ ಪ್ರಭುತ್ವವನ್ನು ತೋರಿಸಿದ್ದಾರೆ. ತಿಮ್ಮಲಾಪುರಕ್ಕೆ ಮರದ ರಥ ವಿಭಾಪುರಕ್ಕೆ ಶ್ರೀ ಆಂಜನೇಯ ಸ್ವಾಮಿ ರಥ ಮತ್ತು ಪ್ರಭಾವಳಿ ರಚಿಸಿದ್ದಾರೆ. ಅನೇಕ ದೇವಸ್ಥಾನಗಳಿಗೆ ಮರದ ರಥಗಳನ್ನು ಮತ್ತು ಪ್ರಭಾವಳಿಗಳನ್ನು ರಚಿಸಿದ ಇವರು ೧.೧೨.೧೯೯೭ ರಂದು ನಿಧನರಾದರು.



# ಕೆ. ಜಿ. ಶಾಂತಪ್ಪ

**ಜಿ. ಎಂ. ಸದಾಶಿವ**

ಸಾಂಪ್ರದಾಯಿಕ ಕಲಾವಿದರ ಗುಂಪಿಗೆ ಸೇರಿದ ಗುಡಿಗಾರ ಜನಾಂಗವು ಭಾರತದಲ್ಲೇ ಅತಿ ಚಿಕ್ಕ ಸಮಾಜಗಳಲ್ಲಿ ಒಂದು. ಹಿಂದೆ ಈ ಜನಾಂಗದ ಪೂರ್ವಿಕರು ದೇವಸ್ಥಾನ ಹಾಗೂ ದೇವಸ್ಥಾನದ ರಥೋತ್ಸವ ಕಾಲದಲ್ಲಿ ರಥದ ಕೆಲಸ ಮಾಡಿದ್ದರಿಂದ ಇವರಿಗೆ ಗುಡಿಗಾರರು ಎಂದು ಹೆಸರು ಬಂದಿರಬಹುದು.

ಶ್ರೀ ಗಂಧ, ದಂತ ಹಾಗೂ ಕೆಲವು ವಿಶಿಷ್ಟ ಜಾತಿಯ ಮರಗಳು, ಬೆಂಡಿನಿಂದ ಬಾಸಿಂಗ, ಹಾರ, ಹೂವು, ಮುಂತಾದವುಗಳನ್ನು ಮಾಡುವ ಹಾಗೂ ಮಣ್ಣಿನಿಂದ ಗಣಪತಿ ವಿಗ್ರಹವನ್ನು ಮಾಡುವ ತಮ್ಮ ಕುಲ ಕಸುಬನ್ನು ತಲ ತಲಾಂತರದಿಂದ ರೂಡಿಸಿಕೊಂಡು ಬಂದಿರುವ ಗುಡಿಗಾರರು ಮಹಾರಾಷ್ಟ್ರ ಮತ್ತು ಗೋವಾರಾಜ್ಯಗಳ ಕೆಲ ಭಾಗದಲ್ಲಿ ಟರ್ನಿಂಗ್ ಕೆಲಸ, ಪೇಯಿಂಟಿಂಗ್ ಮಾಡುತ್ತಾ, ಧಾರ್ಮಿಕ ಪರಂಪರೆಯನ್ನೂ ಬೆಳಸಿ ಕೊಂಡಿರುವ ಅಪರೂಪದ ಜನಾಂಗ.

ಗುಡಿಗಾರರೆಲ್ಲಾ ಸಾಮಾನ್ಯವಾಗಿ ಕೈ ಕೆತ್ತನೆ ಕೆಲಸದಿಂದ ಜೀವಿಸುವವರು. ಆದರೆ ಕೈ ಕೆತ್ತನೆ ಕೆಲಸ ಮಾಡುವವರೆಲ್ಲರೂ ಗುಡಿಗಾರರಲ್ಲ. ಕರ್ನಾಟಕದ ಹಳೆ ಮೈಸೂರಿನ ಭಾಗದಲ್ಲಿ ಗುಡಿಗಾರರೆಂದೂ. ಉತ್ತರಕನ್ನಡ ಭಾಗದವರಿಗೆ ಶೆಟ್ಟಿ, ಶೇಠ್, ಚಿತ್ರಕ ಎಂದೂ ಮಹಾರಾಷ್ಟ್ರ ಮತ್ತು ಗೋವಾ ರಾಜ್ಯದಲ್ಲಿ ಚಿತಾರಿ, ಬಾಂದೋಡ್ಕರ್, ಚೇಳಳ್ಳರ್ ಎಂದೂ ತಮ್ಮನ್ನು ತಾವು ಗುರುತಿಸಿಕೊಂಡಿದ್ದಾರೆ.

ಗುಡಿಗಾರರು ರಾಜಾಶ್ರಯದಲ್ಲಿ ಕೆಲಸ ಮಾಡಿದ್ದರಿಂದ ಕ್ಷತ್ರಿಯ ಕುಲದ ಮೂಲದವರೆಂಬುದೂ, ಕೈ ಕೆತ್ತನೆ ಕೆಲಸ ಮಾಡುವುದರಿಂದ ವಿಶ್ವಕರ್ಮ ಮೂಲದವರೆಂದೂ ಐತಿಹ್ಯವಿದೆ. ಮೂಲತಹ ಗೋವಾದವರಾದ ಇವರು ಪೋರ್ಚುಗೀಸರ ಮತಾಂತರದ ಗಲಾಟೆಗೆ ಹೆದರಿ ಉತ್ತರಕನ್ನಡ ಜಿಲ್ಲೆಯ ಅಂಕೋಲ, ಕಾರವಾರ, ಕುಮಟಾ, ಯಲ್ಲಾಪುರ, ಶಿರಸಿ, ಹೊನ್ನಾವರ, ಶಿವಮೊಗ್ಗ ಜಿಲ್ಲೆಯ ಸೂರಬ, ಸಾಗರಗಳಿಗೂ ಬಂದು ನೆಲಸಿದರೆನ್ನಲಾಗಿದೆ. ಹೀಗೆ ಬಂದವರೆಲ್ಲಾ ಒಂದು ಮನೆಯವರು, ಸೋಂದ ಸಂಸ್ಥಾನಕ್ಕೂ, ಇನ್ನೊಂದು ಮನೆಯವರು ಬಿಳಗಿ ಸಂಸ್ಥಾನಕ್ಕೂ ಸೇರಿದರು.

**ಪರಿಚಯ:**

ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲ್ಲೂಕಿನಲ್ಲಿರುವ ಖರ್ಜಗಿಯು ಒಂದು ಪುಟ್ಟ ಹಳ್ಳಿ. ಈ ಪ್ರದೇಶವು ಸಮಾರು ೧೪ನೇ ಶತಮಾನದ ಹಿಂದೆ ಬಿಳಗಿ ಸಂಸ್ಥಾನದ ರಾಜರ ಆಡಳಿತಕ್ಕೆ

ಒಳಪಟ್ಟಿತ್ತು. ಇಲ್ಲಿಯ ರಾಜಾಶ್ರಯದಲ್ಲಿ ಸುಮಾರು ೭೮ ಗುಡಿಗಾರರ ಕುಟುಂಬದವರು ವಾಸವಾಗಿದ್ದರು. ಈ ಕುಟುಂಬಗಳಲ್ಲಿ ಕಲಾವಿದರ ಮನೆತನಕ್ಕೆ ಸೇರಿದ ಶಾಂತಪ್ಪನವರ ಪೂರ್ವಿಕರ ಕುಟುಂಬವೂ ಒಂದು. ಆದ್ದರಿಂದ ಇವರಿಗೆ ಖರ್ಜಗಿ ಶಾಂತಪ್ಪನವರೆಂದೇ ಹೆಸರಾಯಿತು. ತದ ನಂತರ ಇವರ ತಂದೆ ತಾಯಿಗಳು ಖರ್ಜಗಿಯನ್ನು ಬಿಟ್ಟು ಸೊರಬ ತಾಲ್ಲೂಕಿನ ಇರಾಣಪುರ ಗ್ರಾಮಕ್ಕೆ ತಮ್ಮ ವಾಸ್ತವ್ಯವನ್ನು ಬದಲಾಯಿಸಿದರು. ಶಾಂತಪ್ಪನವರ ತಂದೆಯವರೂ ಕೂಡ ಪಲ್ಲಕ್ಕಿ, ಮಂಟಪ, ತೇರಿನ ಗೆಡ್ಡೆಯ ಕೆಲಸ ಮುಂತಾದ ಹೆಚ್ಚು ಗಾತ್ರದ ಮತ್ತು ಪರಿಶ್ರಮದ ಕೆಲಸಗಳಲ್ಲಿ ನಿಪುಣರಾಗಿದ್ದರು. ಕಲೆಯು ಅನೇಕ ಜನರಲ್ಲಿ ವಿವಿದ ರೀತಿಯಲ್ಲಿ ವಿಕಾಸಗೊಳ್ಳುತ್ತದೆ, ಅನೇಕ ಜನರನ್ನು ಸುಖಸಾಗರದಲ್ಲಿ ಮುಳುಗಿಸುವ ಕಲಾವಿದ ತಾನು ಮಾತ್ರ ಸಂಸಾರ ಸಾಗರದ ಅಲೆಗಳಲ್ಲಿ ಸಿಲುಕಿ ದುಃಖವನ್ನು ಅನುಭವಿಸುತ್ತಿದ್ದರೂ ಕೂಡಾ ಸುಖದ ಸುಪ್ಪತ್ತಿಗೆಯಲ್ಲಿದ್ದೇನೆ ಎಂದು ಭಾವಿಸುವ ಕಲಾವಿದರಲ್ಲಿ ದಿವಂಗತ ಖರ್ಜಗಿ ಶಾಂತಪ್ಪನವರು ಉದಾಹರಣೆಯಾಗಿರುತ್ತಾರೆ. ಇವರು ಅನೇಕ ದೃಷ್ಟಿಕೋನದ ಬಹುಮುಖ ವ್ಯಕ್ತಿತ್ವದ ಒಬ್ಬ ಶ್ರೇಷ್ಟ ಕಲಾ ತಪಸ್ವಿ.

'ಅಡು ಮುಟ್ಟದ ಸೊಪ್ಪು ಇಲ್ಲ' ಎಂಬ ಗಾದೆಯ ಮಾತಿನಂತೆ ಇವರು ಮುಟ್ಟಿರಚಿಸಿದ ಮಾಧ್ಯಮಗಳ ಕಲಾಕೃತಿಗಳಿಲ್ಲ. ಶ್ರೀ ಗಂಧದಂತ, ವಿಶಿಷ್ಟ ಜಾತೀಯ ಮರ, ಸಾಮಾನ್ಯ ಜಾತೀಯ ಮರ, ಗ್ರಾನೈಟ್ ಕಲ್ಲು, ಬಳಪದ ಕಲ್ಲು, ಅಮೃತ ಶಿಲೆ, ಲೋಹ, ಅಡಿಕೆ, ಏಲಕ್ಕಿ, ಬೊಂಬು, ಕಾರ್ಡ್‌ಬೋರ್ಡ್, ಬೆಂಡು, ಮಣ್ಣು, ಸಿಮೆಂಟ್, ಪೇಪರ್ ಪಲ್ಪ್ ಮತ್ತು ಪೇಯಿಂಟಿಂಗ್ ಹೀಗೆ ಅನೇಕ ಮಾಧ್ಯಮಗಳಲ್ಲಿ ಶಾಂತಪ್ಪನವರ ಕೌಶಲ್ಯತೆಯು ಮೂಡಿ ಬಂದಿರುತ್ತದೆ.

ಇವರು ಈ ಎಲ್ಲಾ ಮಾದ್ಯಮಗಳಲ್ಲೂ ಕೈ ಅಡಿಸಿರುವುದು ಹಣ ಮತ್ತು ಹೆಸರು ಸಂಪಾದನೆ ಮಾಡಬೇಕೆಂಬ ಉದ್ದೇಶದಿಂದ ಅಲ್ಲ. ಗುಡಿಗಾರರು ಯಾವ ಮಾಧ್ಯಮದಲ್ಲಾದರೂ ತಮ್ಮ ಕೌಶಲ್ಯತೆಯನ್ನೂ ಮೂಡಿಸುವುದರಲ್ಲಿ ನಿಪುಣರು ಎಂದು ತೋರಿಸುವುದಕ್ಕಾಗಿ ಮತ್ತು ಶ್ರೀ ಗಂಧದ ಮಾಧ್ಯಮಕ್ಕೊಂದಕ್ಕೇ ಅಂಟಿಕೊಂಡಿರುವ ಗುಡಿಗಾರರು ಮುಂದೆ ಎದುರಾಗಬಹುದಾದ ಶ್ರೀಗಂಧದ ಅಭಾವದ ಪರಿಸ್ಥಿತಿಯಲ್ಲಿ ಹೇಗೆ ಇತರೆ ಮಾಧ್ಯಮಗಳಿಗೆ ತಮ್ಮ ಕಲೆಯನ್ನು ಅಳವಡಿಸಿ ತಮ್ಮ ಜೀವನವನ್ನು ಸಾರ್ಥಕಗೊಳಿಸಲು ಸಹಾಯವಾಗುವಂತೆ ಯುವ ಪೀಳಿಗೆಗೆ ತೋರಿಸುವ ದೃಷ್ಟಿಯಿಂದ ಎಲ್ಲಾ ಮಾಧ್ಯಮಗಳಲ್ಲೂ ಕೈ ಅಡಿಸಿರುವುದು ಅವರ ಮುಂದಾಲೋಚನೆಯ ಒಂದು ಸೂಚನೆಯಾಗಿದೆ. ಇವರು ಸಮಾಜದಲ್ಲೆ ಒಬ್ಬ ವ್ಯಕ್ತಿ ಮಾತ್ರವಾಗಿರದೆ ಒಂದು ಶಕ್ತಿಯೂ ಕೂಡ ಅಗಿದ್ದರು.

**ಜನನ:**

ಶಾಂತಪ್ಪನವರು ತಾರೀಖು ೨೪-೮-೧೯೧೬ನೇ ಇಸವಿಯಲ್ಲಿ ಸೊರಬ ತಾಲ್ಲೂಕಿನ ಇರಾಣಪುರ ಗ್ರಾಮದಲ್ಲಿ, ತಂದೆ ರಾಮಪ್ಪನವರಿಗೂ ತಾಯಿ ಜಾಡಮ್ಮನವರಿಗೂ ಮೂರನೇ ಪುತ್ರರಾಗಿ ಹಾಗೂ ಹಿರಿಯ ಸಹೋದರರಾದ ಗಣಪತಪ್ಪ ಮತ್ತು ಚೌಡಪ್ಪನವರಿಗೂ ಹಿರಿಯ ಸಹೋದರಿಯರಾದ ಸಾವಿತ್ರಮ್ಮ ಹಾಗೂ ಪಾರ್ವತಮ್ಮನವರಿಗೂ ಕಿರಿಯ ತಮ್ಮನಾಗಿ ಜನಿಸಿದರು. ಇವರು ಸುಮಾರು ೬ ತಿಂಗಳು ಶಿಶುವಿದ್ದಾಗ ಇವರ ತಾಯಿಯವರು ತೀರಿಕೊಂಡರು. ಇವರ ತಾಯಿಯವರು ಸತ್ತ ನಂತರ ಅವರ ಇಚ್ಚೆಯಂತೆ ಶಿರಸಿಯಲ್ಲಿರುವ ಇವರ ದೊಡ್ಡಮ್ಮನವರಾದ

ದೇವಕಮ್ಮನವರು ಸಾಕಿದರು. ಹೀಗೆ ಸುಮಾರು ೫-೬ ವರ್ಷಗಳವರೆಗೆ ಇವರ ದೊಡ್ಡಮ್ಮನವರ ಆಶ್ರಯದಲ್ಲಿಯೇ ಬೆಳೆದರು.

## ಬಾಲ್ಯ ಜೀವನ

ಅಗ ಇವರ ಚಟುವಟಿಕೆ ಮಾತಿನ ವಾಗ್ಜರಿ, ವೈಚಾರಿಕತೆ ಇತ್ಯಾದಿಗಳನ್ನು ಗಮನಿಸಿದ ಇವರ ಬಂಧುಗಳು ಇವರಲ್ಲಿ ಯಾವುದೋ ಒಂದು ಶಕ್ತಿ ಅಡಗಿದೆ ಎಂದು ತಿಳಿದಿದ್ದರು. ಹೀಗೆ ಇವರ ನಡವಳಿಕೆಯಿಂದ ಎಲ್ಲರಲ್ಲೂ ಪ್ರೀತಿ ಪಾತ್ರರಾಗಿದ್ದರು. ಇವರು ಪ್ರಬುದ್ಧ ಮಾನಕ್ಕೆ ಬಂದ ನಂತರ ಇವರಲ್ಲಿರುವ ಒಂದು ವಿಶೇಷವಾದ ಶಕ್ತಿಯು ಪುನಃ ಇರಾಣಪುರಕ್ಕೆ ಎಳೆದುಕೊಂಡು ಹೋಯಿತು.

ಇವರ ಸೋದರಮಾವ ಗುಡಿಗಾರರ ಆಚಾರ್ಯ ಪುರುಷರಾದ ಮೂಡುಗೋಡು ಹಿರಣ್ಯಪ್ಪನವರಲ್ಲಿ ಅಕರ್ಷಿತರಾಗಿ ಮೂಡುಗೋಡಿನ ಇವರ ಮಾವನವರ ಮನೆಯಲ್ಲಿಯೇ ಬಂದು ಉಳಿದರು. ಮೂಡುಗೋಡಿಗೂ ಇರಾಣಪುರಕ್ಕೂ ಸುಮಾರು ೨-೩ ಮೈಲಿ ದೂರವಿರಬಹುದು. ಇವರು ಅಗಾಗ್ಗೆ ಮಾವನ ಮನೆಗೆ ಬಂದು ಅವರು ತಯಾರಿಸುತ್ತಿದ್ದ ಕಲಾಕೃತಿಗಳ ಕಡೆ ಗಮನ ಹರಿಸಿ ಅವರ ಕಾರ್ಯವಿಧಾನ, ನಿಯಮ ನಿಷ್ಠೆಗಳನ್ನು ಪರಿಶೀಲಿಸಿ ತನ್ನಲ್ಲಿ ಕರಗತ ಮಾಡಿಕೊಳ್ಳಲು ಪ್ರಯತ್ನ ಮಾಡುತ್ತಿದ್ದರು. ಇವರ ಮಾವನವರು ೧೦-೧೨ ಎಕರೆ ಜಮೀನಿನ ಒಡೆಯರಾಗಿದ್ದರು. ಇವರು ಮಾವನ ಮನೆಯ ಜಮೀನಿನ ವ್ಯವಸಾಯದ ಕೆಲಸ ಮಾಡುವುದು ಅವರ ಮನೆಯ ದನಗಳನ್ನು ಕಾಯುವುದು ಹೀಗೆ ಭೂಮಾತೆ ಹಾಗೂ ಗೋಮಾತೆಯ ಸೇವೆ ಮಾಡುವುದರಲ್ಲಿಯೇ ತೃಪ್ತಿ ಮತ್ತು ಸಂತೋಷವನ್ನು ಕಂಡು ಶಾಲೆಗೆ ಸೇರುವುದಕ್ಕೆ ಶರಣು ಹೊಡೆದರು. ಇವರು ಭೂಮಾತೆ ಮತ್ತು ಗೋಮಾತೆಯ ಸೇವೆ ಸಲ್ಲಿಸುವುದರೊಂದಿಗೆ ಪ್ರಕೃತಿಯ ಅರಾಧಕರೂ ಅಗಿದ್ದರು.

ಸೊರಬದ ಮೇಲಿನ ಮನೆ ನಾರಾಯಣಪ್ಪನವರ ಸ್ನೇಹವನ್ನು ಬೆಳೆಸಿ ಇವರಿಬ್ಬರೂ ಪ್ರತಿದಿವಸ ದನಗಳನ್ನು ಮೇಯಿಸುತ್ತಾ ಮೂಡಗೋಡು ಇರಾಣಪುರದ ಮಧ್ಯೆ ಇರುವ ಸಣ್ಣ ಹೊಳೆಯ ಹಾಗೂ ಸುತ್ತಮುತ್ತಲಿನ ಮಲೆನಾಡಿನ ಪ್ರಕೃತಿಯ ಸೊಬಗನ್ನು ಸವಿಯುವುದು ಅವರ ದಿನನಿತ್ಯದ ಅಭ್ಯಾಸವಾಗಿತ್ತು. ಇವರು ಪ್ರತಿದಿವಸವು ಬೆಳಿಗ್ಗೆಯಿಂದ ಸಾಯಂಕಾಲದವರೆಗೂ ಹೊಳೆಯ ಪಕ್ಕದಲ್ಲಿರುವ ಗದ್ದೆಗಳಲ್ಲಿ ವ್ಯವಸಾಯದ ಕೆಲಸ ಮಾಡುತ್ತಾ ಹಕ್ಕಿಗಳ ಕಲರವವನ್ನು ಕೇಳುತ್ತಾ ದನಗಳಿಗೆ ಮೈ ತೊಳೆಸುವುದು ಈಜಾಡುವುದು ಹೀಗೆ ಕರ್ತವ್ಯ ಪಾಲನೆಯ ಜೊತೆಗೆ ಸೇವಾ ನಿಷ್ಠೆಯು ಮುಖ್ಯ ಎಂದು ತಿಳಿದು ತೃಪ್ತಿ ಪಡುತ್ತಿದ್ದರು. ಇವರು ಚಿತ್ರಕಲೆ, ಶಿಲ್ಪಕಲೆ ಮುಂತಾದ ಸಾಂಪ್ರದಾಯಿಕ ಕಲೆಗಳಲ್ಲಿ ಶ್ರದ್ದೆ, ಆಸಕ್ತಿ, ಬೆಳೆಯುಬೇಕಾದರೆ ಪರಿಸರವೂ ಕೂಡಾ ಪ್ರಮುಖ ಪಾತ್ರ ವಹಿಸುತ್ತದೆ. ನಿಸರ್ಗ, ಜಾನಪದ, ಗ್ರಾಮ್ಯ ಮೂಲದ ಬದುಕಿನ ಸುಖ ದುಃಖಗಳು ಮುಂದಿನ ಇವರ ಕಲಾ ಜೀವನದ ಮೇಲೆ ಬೀರಿದ ಪ್ರಭಾವ ಬಹಳ ಪ್ರಾಮುಖ್ಯವಾದುದು. ಇವರು ಸುಂದರವಾದ ನಿಸರ್ಗದ ಸೌಂದರ್ಯವನ್ನು ಮುಂದೆ ತಮ್ಮ ಕಲಾ ಜೀವನದಲ್ಲಿ ಕಲಾಕೃತಿಗಳ ನಿರ್ಮಾಣದಲ್ಲಿ ಹೇಗೆ ಅಳವಡಿಸಿಕೊಳ್ಳುವುದು ಎಂಬ ಬಗ್ಗೆಯೂ ಚಿಂತನೆ ಮಾಡುತ್ತಿದ್ದರು. ಮುಂದೆ

ಕೆಲವು ವರ್ಷಗಳ ನಂತರ ಇರಾಣಪುರದ ಸುತ್ತಮುತ್ತಲಿನ ನಿಸರ್ಗದ ರಮಣೀಯ ದೃಶ್ಯಗಳನ್ನು ಗಂಧದ ಪ್ಯಾನಲ್‌ಗಳಲ್ಲಿ ಹಾಗೂ ತೈಲವರ್ಣದ ಚಿತ್ರಗಳಲ್ಲಿ ಸೆರೆ ಹಿಡಿದಿದ್ದರು. ಆನೆ, ಜಿಂಕೆ, ಹುಲಿ, ಮುಂತಾದ ಕಾಡು ಪ್ರಾಣಿಗಳ ಸಣ್ಣಪುಟ್ಟ ಗಂಧದ ಮರದ ಕಲಾಕೃತಿಗಳನ್ನು ನಿರ್ಮಿಸಲು ಆಗಿನಿಂದಲೇ ಪ್ರಾರಂಭ ಮಾಡಿದರು. ಇವರು ತಮ್ಮ ಸೋದರ ಮಾವನ ಮನೆಯಲ್ಲಿ ಕಳೆದ ೭-೮ ವರ್ಷಗಳ ಬಾಲ್ಯ ಜೀವನವು ತಮ್ಮ ಕಲಾ ಜೀವನದ ಪೂರ್ವ ಭಾವಿಯಾದ ಹಾಗೂ ಮೂಲಭೂತವಾದ ಅವಶ್ಯಕತೆಗಳ ಅನುಭವಗಳನ್ನು ಪಡೆಯಲು ಸಹಾಯವಾಯಿತು. ನಂತರ ಸುಮಾರು ೧೪-೧೫ನೇ ವಯಸ್ಸಿನಲ್ಲಿ ಸೋದರ ಮಾವನವರ ಮನೆಯನ್ನು ಬಿಟ್ಟು ಸೊರಬಕ್ಕೆ ಬಂದರು.

## ಯವ್ವನದ ಹೊಸಿಲಲ್ಲಿ:

ಅಗ ಸೊರಬದಲ್ಲಿ ಆನೆಕಲ್ಲು ಸುಬ್ಬರಾಯರು ಗುಡಿಗಾರರ ಹಲವು ಕಲಾವಿದರನ್ನು ವಾರದ ಸಂಬಳದ ಗುತ್ತಿಗೆಯ ಕರಾರಿನ ಮೇಲೆ ಸೇರಿಸಿಕೊಂಡು ಒಂದು ಕಂಪನಿಯನ್ನು ನಡೆಸುತ್ತಿದ್ದರು. ಗುಡಿಗಾರ ಕಲಾವಿದರು ನಿರ್ಮಿಸಿದ ಕಲಾಕೃತಿಗಳನ್ನು ಬೆಂಗಳೂರು ಹಾಗೂ ರಾಜ್ಯದ ಹೊರಗೂ ಕಳುಹಿಸಿಕೊಡುತ್ತಿದ್ದರು. ಅಗ ಬ್ರಿಟೀಷ್ ಸರಕಾರದ ಆಡಳಿತವಾದ್ದರಿಂದ ಗಂಧದ ಕಲಾಕೃತಿಗಳಿಗೆ ದೇಶದ ಒಳಗೂ ಹಾಗೂ ಹೊರಗೂ ಒಳ್ಳೆಯ ಮಾರುಕಟ್ಟೆ ಇತ್ತು, ಈ ಸಮಯದಲ್ಲಿ ಸುಬ್ಬರಾಯರು, ಶಾಂತಪ್ಪನವರ ಕೌಶಲ್ಯತೆ ಮತ್ತು ವಿಶೇಷವಾದ ಬುದ್ಧಿವಂತಿಗೆಯನ್ನು ಗಮನಿಸಿ ಅವರನ್ನು ತಮ್ಮ ಕಂಪನಿಗೆ ಸೇರಿಸಿಕೊಂಡರು. ಅವರು ಶಾಂತಪ್ಪನವರನ್ನು ಕರ್ನಾಟಕ ಉದ್ದಗಲಕ್ಕೂ ತಮ್ಮ ಜೊತೆಯಲ್ಲಿ ಪ್ರವಾಸಕ್ಕೆ ಕರೆದುಕೊಂಡು ಹೋಗಿ ಬೆಂಗಳೂರು, ಮೈಸೂರು ಮುಂತಾದ ಕಡೆಗಳಲ್ಲಿ ಬ್ರಿಟೀಷ್ ಕಂಪೆನಿಯ ಕಛೇರಿಗಳಲ್ಲಿ ಉಪಯೋಗಿಸುತ್ತಿದ್ದ ಪೆನ್ನು, ಪೇಪರ್ ಕಟರ್, ಬುಕ್ ಮಾರ್ಕ್ ಮುಂತಾದವುಗಳನ್ನು ಗಂಧದ ಮರದಲ್ಲಿ ಏಕೆ ತಯಾರಿಸಬಾರದು ಎಂಬ ಬಗ್ಗೆ ದೀರ್ಘವಾಗಿ ಆಲೋಚನೆ ಮಾಡಿದರು, ಇವರು ತಮ್ಮ ದೇಶ ಸಂಚಾರವನ್ನು ಮುಗಿಸಿ ಸೊರಬಕ್ಕೆ ಬಂದ ನಂತರ ಟರ್ನಿಂಗ್ ಮುಖಾಂತರ ಗಂಧದ ಮರದಲ್ಲಿ ಪೆನ್ ಹೋಲ್ಡರ್, ಪೇಪರ್ ವೈಟ್, ಲೈಟ್ ಸ್ಟ್ಯಾಂಡ, ಪೇಪರ್ ಕಟರ್, ಬುಕ್‌ಮಾರ್ಕ್ ಮುಂತಾದ ಕಛೇರಿಯ ಬಳಕೆಯ ವಸ್ತುಗಳನ್ನು ಪ್ರಪ್ರಥಮವಾಗಿ ತಯಾರಿಸಿ ಮಾರುಕಟ್ಟೆಗೆ ಬಿಡುಗಡೆ ಮಾಡಿದರು. ಇದರಿಂದ ದೇಶೀಯ ಹಾಗೂ ವಿದೇಶೀಯ ಮಾರುಕಟ್ಟೆಗಳಲ್ಲಿ ಹೆಚ್ಚಿನ ಪ್ರಾಧಾನ್ಯತೆಯನ್ನು ಪಡೆದು ಮೇಲಿಂದ ಮೇಲೆ ಬೇಡಿಕೆಗಳು ಬಂದು ಕಂಪನಿಗೆ ಗಮನಾರ್ಹವಾದ ಲಾಭವನ್ನುಗಳಿಸಿಕೊಟ್ಟರು. ಕಾಲ ಕ್ರಮೇಣ ಈಗಿನ ಪ್ಲಾಸ್ಟಿಕ್‌ಯುಗದಲ್ಲೆ ಗಂಧದ ಪದಾರ್ಥಗಳ ದುಬಾರಿ ಬೆಲೆಗಳಿಂದ ಕಛೇರಿಗಳಲ್ಲಿ ಇದರ ಬಳಕೆಯು ಕ್ಷೀಣಿಸುತ್ತಾ ಬಂದಿತು.

ಇವರು ಸುಮಾರು ೧೬-೧೭ನೇ ವಯಸ್ಸಿನಲ್ಲಿ ಇವರ ತಂದೆ ರಾಮಪ್ಪನವರು ಶಿರಸಿ ಹತ್ತಿರವಿರುವ ಸೋಂದದಲ್ಲೆ ದೈವಾಧೀನರಾದರು. ಅಗ ಇವರು ಸೊರಬದಿಂದ ಸೋಂದಕ್ಕೆ ಹೋಗಿ ತಂದೆಯವರ ಅಂತ್ಯಕ್ರಿಯೆಗಳಲ್ಲಿ ಭಾಗಿಯಾಗಿ ನಂತರ ತಮ್ಮ ದೊಡ್ಡಮ್ಮನವರ ಮನೆಯಲ್ಲಿಯೇ ಇದ್ದು ತಮ್ಮ ಯೌವ್ವನದ ಕೆಲವು ವಸಂತಗಳನ್ನು ಕಳೆದರು. ಇವರು ಇಲ್ಲಿ ಇದ್ದ

ಸಮಯದಲ್ಲಿ ಬೆಂಡಿನಿಂದ ತಮ್ಮದೇ ಆದ ವಿಶಿಷ್ಟ ಶೈಲಿಯ ಬಾಸಿಂಗಗಳನ್ನು ಸುತ್ತ ಮುತ್ತಲಿನ ಗ್ರಾಮಗಳಲ್ಲಿರುವ ದೇವಾಲಯದ ರಥೋತ್ಸವ ಸಮಯದಲ್ಲಿ ರಥದ ಕೆಲಸಗಳನ್ನು ಮತ್ತು ಶ್ರೀಗಂಧದ ಮತ್ತು ದಂತದ ಸಣ್ಣಪುಟ್ಟ ಕಲಾಕೃತಿಗಳನ್ನು ನಿರ್ಮಿಸಿ ಗ್ರಾಮಿಣ ಪ್ರದೇಶದಲ್ಲಿ ಕಲೆಯ ಅಭಿವೃದ್ಧಿಗೆ ಶ್ರಮಿಸಿದ್ದರು. ಇವರು ಸೋಂದದಲ್ಲಿದ್ದಾಗ ತಮ್ಮ ೨೫ನೇ ವಯಸ್ಸಿನಲ್ಲಿ ೧೯೪೧ನೇ ಇಸವಿಯಲ್ಲಿ ನೀಲೇ ಕಣಿ ಶಿರಸಿಯಲ್ಲಿರುವ ನಾರಾಯಣಪ್ಪ ಗುಡಿಗಾರ ಇವರ ಪ್ರಥಮ ಪುತ್ರಿ ಸುಭದ್ರಮ್ಮಳನ್ನು ಮದುವೆಯಾಗಿ ವೈವಾಹಿಕ ಜೀವಕ್ಕೆ ಪಾದರ್ಪಣೆ ಮಾಡಿದರು.

ಆಗ ಭಾರತದ ಸ್ವಾತಂತ್ರದ ಚಳುವಳಿಯ ಕಾಲ, ಕಾಂಗ್ರೇಸ್ ನಾಯಕರು ಚಳುವಳಿಯ ಪ್ರಚಾರ ಕಾರ್ಯದ ಮುಂಚೂಣಿಯಲ್ಲಿದ್ದರು. ಕಾಂಗ್ರೇಸ್ ನಾಯಕರಾದ ಆರ್. ಆರ್. ದಿವಾಕರ್‌ರವರು ಸೋಂದ ಮಠಕ್ಕೆ ಭೇಟಿ ಕೊಟ್ಟಾಗ ಅವರು ಕಾರ್ಯಕ್ರಮದ ವೇದಿಕೆಯ ಹಿನ್ನಲೆಯಲ್ಲಿ ಪ್ಲೈವುಡನಿಂದ ಒಂದು ಬೃಹದಾಕಾರದ ಭಾರತ ಮಾತೆಯ ಕಟ್‌ಔಟ್(cutout)ನ್ನು ನಿರ್ಮಿಸಿ ಅದಕ್ಕೆ ಒಪ್ಪುವ ತೈಲವರ್ಣವನ್ನು ತುಂಬಿ ವೇದಿಕೆಯನ್ನು ಅಲಂಕರಿಸಿದ್ದರು ಮತ್ತು ಭಾರತ ಸ್ವಾತಂತ್ರ್ಯಗೊಳ್ಳಲಿ ಎಂಬ ಸೂಚನೆಯ ಸಂಕೇತವಾಗಿ ದಂತದಲ್ಲಿ ಭಾರತಮಾತೆಯ ಒಂದು ಸುಂದರವಾದ ವಿಗ್ರಹವನ್ನು ನಿರ್ಮಿಸಿ ಶ್ರೀ ಆರ್. ಆರ್. ದಿವಾಕರ್‌ರವರಿಗೆ ಉಡುಗೊರೆಯಾಗಿ ಕೊಟ್ಟರು. ಈ ಸುಂದರವಾದ ವಿಗ್ರಹವನ್ನು ನೋಡಿ ಬಹಳ ಸಂತೋಷ ಪಟ್ಟು ಇವರಿಗೆ 'ಹುಟ್ಟು ಕಲಾವಿದ' ಎಂಬ ಪ್ರಶಸ್ತಿಯನ್ನು ಕೊಟು ಗೌರವಿಸಿದ್ದರು, ಇದು ಅವರ ಸುಮಾರು ೨೭-೨೮ನೇ ವಯಸ್ಸಿನಲ್ಲಿ ಸಂದ ಪ್ರಥಮ ಪ್ರಶಸ್ತಿಯಾಗಿತ್ತು.

ಮದುವೆಯಾದ ೫-೬ ವರ್ಷಗಳ ನಂತರ ಸೋಂದದಿಂದ ಪತ್ನೀ ಸಮೇತರಾಗಿ ಸೊರಬಕ್ಕೆ ಬಂದು ನೆಲೆಸಿದರು. ಇವರು ಸೊರಬಕ್ಕೆ ಬಂದ ನಂತರ ಮನುಷ್ಯ ಜೀವನದ ಸಾರ್ಥಕತೆಯನ್ನು ಅರ್ಥಮಾಡಿಕೊಂಡು ವಾಸ್ತವಿಕ ಜೀವನಕ್ಕಿಂತ ಸಾಮಾಜಿಕ ಜೀವನಕ್ಕೇ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟದ್ದರು. ಸುಮಾರು ೧೦-೧೨ ವರ್ಷದ ವಯಸ್ಸಿನ ಹುಡುಗರನ್ನು ಸೇರಿಸಿ ಅವರನ್ನು ಊರ ಹೊರಗಿನ ಬಯಲಿಗೆ ಕರೆದುಕೊಂಡು ಹೋಗಿ ಕಬಡ್ಡಿ, ಕೋ ಕೋ ಮುಂತಾದ ಆಟಗಳನ್ನೂ ಆಡಿಸುವುದು, ಆಟವಾಡಿದ ನಂತರ ಇತಿಹಾಸ ಪ್ರಸಿದ್ದರಾದ ಹಾಗೂ ಪುರಣಾಪ್ರಸಿದ್ದರಾದ ವ್ಯಕ್ತಿಗಳ ಕಥೆಗಳನ್ನೂ ಹೇಳುತ್ತಿದ್ದರು. ಸ್ವತಂತ್ರ ಜೀವನವನ್ನು ನಡೆಸುವುದಕ್ಕಾಗಿ ೬೪ ವಿದ್ಯೆಗಳನ್ನು ಕಲಿಯಬೇಕೆಂದು ಬುದ್ದಿವಾದವನ್ನು ಹೇಳಿ ಅದಕ್ಕೆ ಸಂಬಂಧಪಟ್ಟ ಕಥೆಗಳನ್ನು ಹೇಳುತ್ತಿದ್ದರು ಮತ್ತು ಹತ್ತಿರದ ಪ್ರೇಕ್ಷಣೀಯ ಸ್ಥಳಗಳಿಗೆ ವಿಹಾರಾರ್ಥಕ್ಕಾಗಿ ಕರೆದುಕೊಂಡು ಹೋಗುತ್ತಿದ್ದರು. ಇವು ಇವರು ಉದ್ದೇಶಿಸಿದ್ದ ಸಮಾಜದ ಸಂಘಟನೆ ಮತ್ತು ಸಾಮಾಜಿಕ ಸಿದ್ಧಾಂತದ ಪರಿಕಲ್ಪನೆಗಳಾಗಿದ್ದವು.

ಹೀಗೆ ಇವರ ಆಲೋಚನೆಗಳು ಹೊಸ ಹೊಸ ಕಾರ್ಯತಂತ್ರಗಳನ್ನೂ ರೂಪಿಸುತ್ತಿರುವಾಗ ಇವರು ಮಾನವ ಚಾಲಿತ ಕಾಲಿನಿಂದ ಒತ್ತುವ ಕಡತದ ಯಂತ್ರವನ್ನು (ಲೇತ್) ಮೈಲಾರಪ್ಪನವರ ಮನೆಯಲ್ಲಿ ಸಂಯೋಜಿಸಿ ತಮ್ಮ ಕಾರ್ಯವಿಧಾನದಲ್ಲಿ ಹೊಸ ಬದಲಾವಣೆಯನ್ನೂ ತಂದರು. ಆಗ ಕಲಾಕೃತಿಗಳಿಗೆ ಹೊಳಪನ್ನು ಕೊಡಲು ಉಪ್ಪು ಕಾಗದದಿಂದ ಕಲಾಕೃತಿಗಳನ್ನು ಚೆನ್ನಾಗಿ ತೀಡಿ ಹೊಳಪನ್ನು ಕೊಡುತ್ತಾ ಇದ್ದರು. ಇದಕ್ಕೆ ಹೆಚ್ಚಿನ ಸಮಯವು ವ್ಯಯವಾಗುತ್ತಿತ್ತು. ಈ ಕಡತದ

ಯಂತ್ರದ ಮುಖಾಂತರ ಬಫಿಂಗ್ ಮಾಡುವುದರಿಂದ ಅತಿ ಶೀಘ್ರವಾಗಿ ಹೊಳಪನ್ನು ಕೊಡಲು ಸಹಾಯವಾಗುತ್ತಿತ್ತು ಮತ್ತು ಟರ್ನಿಂಗ್ ಮುಖಾಂತರ ಪೇಪರ್ ವೈಟ್, ಲೈಟ್ ಸ್ಟ್ಯಾಂಡ್, ತಟ್ಟೆಗಳು, ಕುಂಕುಮ ಭರಣಿ ಮುಂತಾದ ಕಲಾಕೃತಿಗಳನ್ನು ಅತಿ ಶೀಘ್ರವಾಗಿ ನಿರ್ಮಿಸಲು ಸಹಾಯವಾಗುತ್ತಿತ್ತು. ಮಹಾತ್ಮ ಗಾಂಧೀಜಿಯವರ ತತ್ವಗಳಾದ ಸತ್ಯ ಮತ್ತು ಅಹಿಂಸೆಯನ್ನು ಪ್ರತಿಪಾದಿಸುವ ಗಂಧದ ತಕ್ಕಡಿಯ ಮೇಲೆ ಮೊನಚಾದ ತಿರುಗು ಗೂಟದ ಮೇಲೆ ಶ್ರೀ ಕೃಷ್ಣನ ವಿಗ್ರಹವನ್ನು ನಿಲ್ಲಿಸಿ, ಅದರ ಎರಡು ತಟ್ಟೆಗಳಲ್ಲಿ ಸತ್ಯ ಮತ್ತು ಅಹಿಂಸೆ ಎಂಬ ಎರಡು ಸಮತೂಕದ ಗೋಲಗಳನ್ನು ಇಟ್ಟು, ಮೊನಚಾದ ತಿರುಗು ಗೊಟದ ಮೇಲೆ ಶ್ರೀ ಕೃಷ್ಣನ ವಿಗ್ರಹವನ್ನು ಹೇಗೆ ಸುತ್ತಿದರೂ ಸಮತೂಕದ ಗೋಲಗಳು ಶ್ರೀ ಕೃಷ್ಣನ ವಿಗ್ರಹವು ಕೆಳಗೆ ಬೀಳದಂತೆ ನಿಯಂತ್ರಿಸುವ ಹಾಗೆ ಮಾಡುತ್ತಿದ್ದರು. ಪ್ರತಿಯೊಬ್ಬ ಮಾನವನೂ ಕೂಡಾ ತನ್ನ ಜೀವನದಲ್ಲಿ ಸತ್ಯ ಮತ್ತು ಅಹಿಂಸೆಯನ್ನು ಪಾಲಿಸಿಕೊಂಡು ಬಂದರೆ ಮನುಷ್ಯತ್ವ ಮತ್ತು ಮಾನವೀಯತೆಯ ಮೌಲ್ಯಗಳನ್ನು ಕಾಪಾಡಲು ಸಹಾಯವಾಗುತ್ತದೆ ಎಂಬ ತತ್ವವನ್ನು ಪ್ರಸಾರ ಮಾಡುವುದೇ ಅವರ ಉದ್ದೇಶವಾಗಿತ್ತು. ತಮ್ಮದೇ ಆದ ಸ್ವಾಮ್ಯತ್ವದಲ್ಲಿ ಈ ಕಡತದ ಯಂತ್ರವನ್ನು ಉಪಯೋಗಿಸಿಕೊಂಡು ಈ ರೀತಿಯ ವಿಶಿಷ್ಟವಾದ ವಿಗ್ರಹಗಳನ್ನು ನಿರ್ಮಿಸಲು ಪ್ರಾರಂಭ ಮಾಡಿದರು. ಈ ಸಮತೋಲನದ ಕೃಷ್ಣನ ವಿಗ್ರಹವು ಮಾರುಕಟ್ಟೆಯಲ್ಲಿ ಹೆಚ್ಚಿನ ಬೇಡಿಕೆಗಳನ್ನುಗಳಿಸಿದ್ದವು. ಈ ಯಂತ್ರದಿಂದ ಸಮಾಜದ ಕೆಲವು ಬಂದುಗಳೂ ಕೂಡಾ ಇದರ ಉಪಯೋಗವನ್ನು ಪಡೆದುಕೊಂಡಿದ್ದರು. ಸೊರಬದಲ್ಲಿ ಸುಮಾರು ೫-೬ ವರ್ಷಗಳ ಜೀವನದ ನಂತರ ೧೯೫೫-೫೬ನೇ ಸಾಲಿನಲ್ಲಿ ಸಾಗರಕ್ಕೆ ಬಂದು ಕಾಲಕ್ರಮೇಣ ವಿನೋಬನಗರದಲ್ಲಿ ಒಂದು ನಿವೇಶನವನ್ನು ಪಡೆದು ಸ್ವಂತ ಮನೆಯನ್ನು ಕಟ್ಟಿಕೊಂಡು ನಾಲ್ಕು ಗಂಡು ಮಕ್ಕಳು ಮೂರು ಹೆಣ್ಣುಮಕ್ಕಳ ಜೊತೆ ತುಂಬು ಸಂಸಾರದೊಂದಿಗೆ ನೆಲೆಸಿ ಮುಂದಿನ ತಮ್ಮ ಜೀವನವನ್ನು ಕಳೆದರು.

**ಮಾನವೀಯತೆಯ ಗುಣಗಳು:**

ಇವರು ಸ್ನೇಹ ಜೀವಿ ಮತ್ತು ಸಂಘ ಜೀವಿಗಳಾಗಿದ್ದರು. ಇವರ ಮನೆಗೆ ನೆಂಟರಾಗಲಿ, ಸ್ನೇಹಿತರಾಗಲೀ, ಅತಿಥಿಗಳಾಗಲೀ ಅವರು ದೊಡ್ಡವಾರಾಗಲಿ, ಅಥವಾ ಚಿಕ್ಕವಾಗಿರಲಿ ಬಂದರೆ ಅವರನ್ನು ತಕ್ಕ ಉಪಚಾರಗಳಿಂದ ಸತ್ಕರಿಸಿ ಗೌರವಿಸುತ್ತಿದ್ದರು. ನೆಂಟರಿಷ್ಟರನ್ನು, ಸ್ನೇಹಿತರನ್ನು ಪ್ರೀತಿ ಆದರಗಳಿಂದ ಕಾಣುತ್ತಿದ್ದರು. ತಾನು ತೊಂದರೆಯಲ್ಲಿದ್ದರೂ ಕೂಡಾ ಸಂಕಷ್ಟದಲ್ಲಿರುವವರಿಗೆ ಸಹಾಯ ಹಸ್ತ ನೀಡುವುದು ಇವರ ಮಾನವೀಯತೆಯ ಒಂದು ವಿಶೇಷ ಗುಣವಾಗಿತ್ತು, ತಾವು ರಚಿಸಿದ ಮಾದರಿ ಕಲಾಕೃತಿಗಳನ್ನು ಬರೆದ ರೂಪರೇಖೆಗಳನ್ನು ಲೇತು ಮುಂತಾದ ಕೆಲಸದ ಪರಿಕರಗಳನ್ನು ಕಲಾಭ್ಯಾಸದ ಆಕಾಂಕ್ಷಿಗಳಿಗೆ ನೀಡುತ್ತಿದ್ದುದು ಇವರ ಅರ್ಪಣಾ ಮನೋಭಾವವನ್ನು ತೋರಿಸುತ್ತದೆ. ಇವರು ನಿಷ್ಕಪಟ ವ್ಯಕ್ತಿಯಾಗಿ ಅಜಾತಶತ್ರು ಎನಿಸಿಕೊಂಡಿದ್ದರು.

**ವಿಚಾರವಾದಿಗಳು:**

ಇವರು ವಿಚಾರ ವಾದಿಗಳು ವಿಮರ್ಶಕರು ಹಾಗೂ ವಿಶ್ಲೇಷಣಾಕಾರರು ಆಗಿದ್ದರು. ಇವರ ಮನಗೆ ಬಂದ ನೆಂಟರಿಷ್ಟರ ಹತ್ತಿರ, ಸ್ನೇಹಿತರ ಹತ್ತಿರ ಅಧಿಕಾರಿಗಳ ಹತ್ತಿರ ರಾಜಕಾರಣಿಗಳ

ಹತ್ತಿರ ಯಾವುದೇ ವಿಷಯಗಳನ್ನು ವಿಚಾರ ಮಾಡಿ ಚರ್ಚಿಸಿ ಅದರ ಸತ್ಯಾ ಸತ್ಯತೆಯನ್ನು ಜನರಿಗೆ ತಿಳಿಸಲು ಪ್ರಯತ್ನ ಮಾಡುತ್ತಿದ್ದರು. ಅಂತರಜಾತಿ ವಿವಾಹದ ಬಗ್ಗೆ, ಹಿಂದೂ ಸಂಸ್ಕೃತಿ ಮತ್ತು ಧರ್ಮದ ಬಗ್ಗೆ ಕಲೆಯ ಉಪಾಸನೆ ಬಗ್ಗೆ ವಿಚಾರ ಮಾಡುತ್ತಿದ್ದರು.

ಅವರು ತಮ್ಮ ಸ್ವಂತ ಕಾಲಿನ ಮೇಲೆ ನಿಲ್ಲಲು ಮಕ್ಕಳು ಹೆಣ್ಣು ಮಕ್ಕಳಾದ ಸರೋಜ, ಸೀತಾ, ಚಿಕ್ಕಮ್ಮ ಇವರಿಗೆ ಗಂಧದ ಮಣಿಪುಷ್ಪ ಹಾರ ಮತ್ತು ಗಂಧದ ಹೂವಿನ ಗುಚ್ಚಗಳ ನಿರ್ಮಾಣದ ಪರಿಣಿತರನ್ನಾಗಿ ಮಾಡಿದರು. ಇವರು ಧರ್ಮವನ್ನು ರಕ್ಷಿಸಿದ್ದರಿಂದ ಧರ್ಮವೇ ಇವರನ್ನು ರಕ್ಷಿಸಿ ಮನೆಯಲ್ಲಿನ ಆಗಿನ ಕೆಲವು ಜಟಿಲ ಸಮಸ್ಯೆಗಳನ್ನು ಪರಿಹಾರ ಮಾಡಿತು. ಇವರು ಸಾಗರದಲ್ಲಿ ಶ್ರೀ ಗಂಧದ ಸಂಕೀರ್ಣವು ಪ್ರಾರಂಭವಾದಾಗ ಅದನ್ನು ವಿರೋದಿಸಿದ್ದರು. ಕರ ಕುಶಲ ನಿಗಮವು ಅಥವಾ ಡಿಸೈನ್ ಸೆಂಟರ್ ಇವುಗಳಿಂದ ಕೊಡಲ್ಪಟ್ಟ ಮಾದರಿ ಕಲಾಕೃತಿಗಳನ್ನು ನಕಲು ಮಾಡುವುದು ಗುಡಿಗಾರ ಕುಲ ಕಸುಬಿಗೆ ವಿರೋಧಾತ್ಮಕವಾದ ನಿಲುವು ಎಂದು ವಾದಿಸಿದ್ದರು. ಗುಡಿಗಾರರು ತಮ್ಮದೇ ಆದ ಸ್ವಂತ ವಿನ್ಯಾಸ ಹಾಗೂ ಮಾದರಿಗಳನ್ನು ರೂಪಿಸಿ ಸ್ವಂತಿಕೆಯನ್ನು ಕಾಪಾಡಿಕೊಳ್ಳಬೇಕೆಂದು ವಾದಿಸುತ್ತಿದ್ದರು. ಆದ ಕಾರಣ ತಮ್ಮ ನಾಲ್ಕು ಮಕ್ಕಳಲ್ಲಿ ಯಾರನ್ನೂ ಸಂಕೀರ್ಣಕ್ಕೆ ಸೇರಿಸಲು ಇವರು ಒಪ್ಪಿಗೆಯನ್ನು ಕೊಟ್ಟಿರಲಿಲ್ಲ.

**ಸರ್ಕಾರಿ ಸೇವೆಗಳು:**

ಸರಕಾರದವರು ೧೯೫೦-೫೧ನೇ ಸಾಲಿನಲ್ಲಿ ೫ ವರ್ಷಗಳ ಅವಧಿಗೆ ಸೊರಬದಲ್ಲಿ ಬೆಂಡಿನ ಕೈಗಾರಿಕೆಗಳ ವೃತ್ತಿ ಶಿಕ್ಷಣ ಶಾಲೆಯನ್ನು ತೆರದರು. ಆಗ ಇವರನ್ನು ವೃತ್ತಿ ಶಿಕ್ಷಣದ ಪ್ರಾಚಾರ್ಯರನ್ನಾಗಿ ನೇಮಿಸಿದರು. ಬೆಂಡಿನಿಂದ ಹ್ಯಾಟು, ಹೂವು, ಹಾರಗಳನ್ನು ಮಾಡುವ ಶಿಕ್ಷಣವನ್ನು ಇವರು ನೀಡುತ್ತಿದ್ದರು. ಇದರಿಂದ ಅನೇಕ ಮಹಿಳೆಯರು ಬೆಂಡಿನಿಂದ ಕಾಸಾಕುಚ್ಚಿನಹಾರ, ಸೇವಂತಿಗೆ ಹಾರ, ದುಂಡುಮಲ್ಲಿಗೆ ಹಾರ, ಗುಲಾಬಿಹೂವು ಹೂವಿನಗುಚ್ಚಗಳನ್ನು ತಯಾರಿಸಲು ಕಲಿತು ತಮ್ಮ ಜೀವನದ ದಾರಿಯನ್ನು ಕಂಡು ಕೊಳ್ಳಲು ಸಹಾಯವಾಯಿತು. ಈ ಸಮಯದಲ್ಲಿ ಕರಕುಶಲ ನಿಗಮದ ಅಧ್ಯಕ್ಷಿಣಿಯಾಗಿದ್ದ ಶ್ರೀಮತಿ ಕಮಲಾದೇವಿ ಚಟ್ಟೋಪಾದ್ಯಾಯರವರು ಈ ಬೆಂಡಿನ ಕೇಂದ್ರಕ್ಕೆ ಭೇಟಿ ಕೊಟ್ಟು, ಇವರ ಕಾರ್ಯಕ್ರಮವನ್ನು ವೀಕ್ಷಿಸಿ ಬಹಳ ಸಂತೋಷಪಟ್ಟರು. ನಂತರ ಇವರು ಶ್ರೀಮತಿ ಕಮಲಾದೇವಿ ಚಟ್ಟೋಪಾದ್ಯಾಯರವರಿಗೆ ಬೆಂಡಿನಿಂದ ತಯಾರಿಸಿದ ಭಾರತ ಮಾತೆಯ ವಿಗ್ರಹವನ್ನು ಉಡುಗೊರೆಯಾಗಿ ಕೊಟ್ಟರು. ೧೯೫೭-೫೮ನೇ ಇಸವಿಯಲ್ಲಿ ಬೆಂಗಳೂರಿನಲ್ಲಿ ಕೇಂದ್ರ ಸರ್ಕಾರದ ವತಿಯಿಂದ ಪ್ರಾರಂಭವಾದ ಡಿಸೈನ್ ಸೆಂಟರಿನಲ್ಲಿ ಇವರು ಸಹಾಯಕ ಮಾಸ್ಟರ್ ಕ್ರಾಫ್ಟಮನ್ ಹುದ್ದೆಗೆ ನೇಮಕಗೊಂಡಿದ್ದರು. ಆದರೆ ಅವರು ಗ್ರಾಮಾಂತರ ಪ್ರದೇಶಗಳಲ್ಲಿ ಕಲಾ ಸೇವೆಯನ್ನು ಮಾಡುವ ದೃಷ್ಟಿಯಿಂದಲೂ ಗ್ರಾಮಿಣ ಬದುಕಿಗೆ ಆಸೆ ಪಟ್ಟಿದ್ದರಿಂದಲೂ ಮತ್ತು ಇತರ ಅವರ ವೈಯುಕ್ತಿಕ ಅಭಿಪ್ರಾಯಗಳಿಂದಲೂ ಆ ಹುದ್ದೆಯನ್ನು ಒಪ್ಪಿಕೊಳ್ಳಲಿಲ್ಲ. ನಂತರ ಸರಕಾರದವರು ಸಾಗರ, ಶಿವಮೊಗ್ಗ, ಕುಮಟಾಗಳಲ್ಲಿ ಸರಕಾರಿ ವೃತ್ತಿ ಶಿಕ್ಷಣ ಶಾಲೆಗಳಲ್ಲಿ ಕಲಾ ಪ್ರಾಚಾರ್ಯರನ್ನಾಗಿ ನೇಮಕ ಮಾಡಿದ್ದರು. ಸರ್ಕಾರದ ಸೇವೆಯಲ್ಲಿದ್ದಾಗ ತಮ್ಮ ಶಿಕ್ಷಕ ವೃತ್ತಿಯನ್ನು ನೆಮ್ಮದಿಯಿಂದ ನಿರ್ವಹಿಸಿ ನಿವೃತ್ತಿ ವಯಸ್ಸು ತಲುಪಿದ ಮೇಲೆ ನಿವೃತ್ತರಾದರು.

**ಇವರ ಕಲಾಕೃತಿಗಳು:**

ಇವರು ಗುಡಿಗಾರರ ಕುಲ ಕಸುಬಿಗೆ ಸಂಬಂಧಪಟ್ಟಂತೆ ಗಂಧದ ಕೆತ್ತನೆಯ ಕೆಲಸ, ಶಿಲ್ಪಕಲೆ, ಮಣ್ಣಿನಿಂದ ಗಣಪತಿಯನ್ನು ಮಾಡುವುದು, ಬೆಂಡಿನ ಕೆಲಸ ಇವುಗಳಲ್ಲಿ ಪರಿಣಿತರಾಗಿರುವುದು ಮಾತ್ರವಲ್ಲದೆ, ತಾಂತ್ರಿಕ ಜ್ಞಾನ (engineering) ವಾಸ್ತುಶಿಲ್ಪ ಮುಂತಾದ ಕಟ್ಟಡದ ನಿರ್ಮಾಣದ ಕಲೆಯಲ್ಲಿ ಮತ್ತು ಸಂಶೋಧನ ಕೌಶಲ್ಯತೆಯಲ್ಲಿ (Inventive skill) ಸಾಕಷ್ಟು ಜ್ಞಾನ ಪಡೆದಿದ್ದರು. ಇವರ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಕಟ್ಟಿದ ಸಾಗರದ ಗುಡಿಗಾರ ಸಮಾಜದ ಶ್ರೀ ರಾಮಚಂದ್ರ ದೇವಾಲಯದ ಬಾಹ್ಯಾಂಗ ರಚನೆ ಒಳಗಿನ ಸುಕನಾಸಿಯಲ್ಲಿರುವ ಕುಸುರಿ ಕೆಲಸದ ವಿನ್ಯಾಸ ಮತ್ತು ಹೊರನೋಟವೇ ಸಾಕ್ಷಿಯಾಗಿದೆ. ಇವರು ತಮ್ಮ ೨೮-೩೦ನೇ ವಯಸ್ಸಿನಲ್ಲಿಯೇ ದಂತದ ಕವಚದ ಉತ್ತರ ಮುಖಿ (ದಿಕ್ಸೂಚಿಯ) ಮತ್ತು ಕೈಗಡಿಯಾರಗಳನ್ನು ನಿರ್ಮಿಸಿದ್ದರು. ಸಮತೋಲನದ ಕೃಷ್ಣ ಇವು ಅವರ ಸಂಶೋಧನೆಯ ಕೌಶಲ್ಯತೆಗೆ ಉದಾಹರಣೆಗಳಾಗಿವೆ.

ಇವರು ಸಾಗರದಲ್ಲಿ ಪ್ರತಿವರ್ಷವೂ, ಗಣೇಶನ ಚತುರ್ಥಿ ಹಬ್ಬದ ಪ್ರಯುಕ್ತ ಮಣ್ಣಿನಲ್ಲಿ ಒಂದು ಗಣಪತಿಯನ್ನು ವಿಶೇಷವಾಗಿ ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಸಾಗರದ ಜನರೆಲ್ಲರನ್ನು ಆಕರ್ಷಿಸಿ, ಬಂದು ನೋಡಿ ಮೆಚ್ಚುಗೆ ವ್ಯಕ್ತಪಡಿಸುವ ರೀತಿಯಲ್ಲಿ ಮಾಡುತ್ತಿದ್ದರು. ಗಂಧದ ಪೆಟ್ಟಿಗೆ, ಪ್ಯಾನಲ್ ಬೀಸಣಿಕೆ ಮುಂತಾದ ಕಲಾಕೃತಿಗಳನ್ನು ಮಾಡುವಾಗ ಉತ್ಪತ್ತಿಯಾಗುವ ಕಸದ ಹೊಟ್ಟನ್ನು ಹಾಳು (Waste) ಮಾಡಬಾರದೆಂಬ ದೃಷ್ಟಿಯಿಂದ ಅವುಗಳನ್ನು ಉಪಯೋಗಿಸಿಕೊಂಡು ವಿವಿಧ ಬಗೆಯ ಗಂಧದ ಹಾರಗಳ ಹೊಸ ಅವಿಷ್ಕಾರವನ್ನೇ ಮಾಡಿ ಅವುಗಳನ್ನು ಮಾಡುವ ವಿಧಾನವನ್ನು ಎಲ್ಲರಿಗೂ ಕಲಿಸಿ, ಗುಡಿಗಾರ ಸಮಾಜದ ಹಾಗೂ ಇನ್ನಿತರ ಸಮಾಜದ ನಿರ್ಗತಿಕ ಮಹಿಳೆಯರ ಜೀವನಕ್ಕೆ ದಾರಿ ದೀಪವಾದರು. ಸಾಗರದ ಸಮೀಪವಿರುವ ವರದಹಳ್ಳಿ ಮಠದ ಶ್ರೀ ಶ್ರೀ ಶ್ರೀ ಶ್ರೀ ಧರಸ್ವಾಮಿಗಳಿಗೆ ನಾಲ್ಕು ಅಡಿ ಎತ್ತರದ ಶ್ರೀ ಗಂಧದ ಸಿಂಹಾಸನವನ್ನು ನಿರ್ಮಿಸಿಕೊಟ್ಟು ಅವರ ಅನುಗ್ರಹಕ್ಕೆ ಪಾತ್ರರಾಗಿದ್ದರು. ಬಳ್ಳಾರಿಯ ಶ್ರೀ ಶ್ರೀ ಶ್ರೀ ನರಹರಿ ಸ್ವಾಮಿಗಳಿಗೆ ಆರು ಅಡಿ ಎತ್ತರದ ಮರದ ಸಿಂಹಾಸನವನ್ನು ಮಾಡಿಕೊಟ್ಟಿರುತ್ತಾರೆ. ಸಿದ್ದಾಪುರ ತಾಲ್ಲೂಕು ಹೇರೂರು ಗ್ರಾಮಕ್ಕೆ ಹತ್ತು ಅಡಿ ಎತ್ತರದ ಮರದ ಮಾರಮ್ಮನ ವಿಗ್ರಹವನ್ನು ನಿರ್ಮಿಸಿದ್ದರು. ೧೯೫೩ನೇ ಇಸವಿಯಲ್ಲಿ ಶ್ರೀ ಪಂಡಿತ ಜವಾಹರ್‌ಲಾಲ್ ನೆಹರೂರವರು ಸಾಗರಕ್ಕೆ ಭೇಟಿ ಕೊಟ್ಟಾಗ ಅವರಿಗೆ ದಂತದ ಪಂಚಶೀಲ ಹಾರವನ್ನು ನಿರ್ಮಿಸಿಕೊಟ್ಟಿದ್ದರು. ನೆಹರೂರವರು ಈ ಹಾರವನ್ನು ನೋಡಿ ಬಹಳ ಸಂತೋಷ ಪಟ್ಟು ಈ ಹಾರವನ್ನು ನಿರ್ಮಿಸಿದ ಕಲಾವಿದನನ್ನು ನೋಡಬೇಕೆಂಬ ಅಸೆಯಿಂದ ತಾವು ಉಳಿದುಕೊಂಡಿದ್ದ ಜೋಗಫಾಲ್ಸ್‌ನಲ್ಲಿರುವ ವಿದ್ಯುತ್ ಇಲಾಖೆಗೆ ಸೇರಿದ ಸರ್ಕ್ಯೂಟ್ ಹೌಸ್‌ಗೆ ಶಾಂತಪ್ಪನವರನ್ನು ಕರೆಸಿಕೊಂಡು ಬೆನ್ನು ತಟ್ಟಿ ಗುಣಗಾನ ಮಾಡಿ ಪ್ರಶಂಸೆಯನ್ನು ವ್ಯಕ್ತಪಡಿಸಿದ್ದರು. ೧೯೫೪-೫೫ನೇ ಇಸವಿಯಲ್ಲಿ ರಷ್ಯದ ನಾಯಕರಾಗಿದ್ದ ಶ್ರೀ ಬುಲ್ಗಾನಿನ್ ಮತ್ತು ಕೃಶ್ಚೇಕರವರು ಭಾರತಕ್ಕೆ ಬಂದಿದ್ದಾಗ ಸರಕಾರದ ಅಜ್ಞೆಯಂತೆ ಪ್ರಥಮವಾಗಿ ಗಂಧದ ಮಣಿ ಪುಷ್ಪ ಹಾರವನ್ನು ನಿರ್ಮಿಸಿ ದೆಹಲಿಗೆ ಕಳುಹಿಸಿಕೊಟ್ಟಿದ್ದರು.

ಸ್ವಲ್ಪ ಕಾಲದ ನಂತರ ಶ್ರೀ ಗಂಧದ ಮಾಧ್ಯಮದಿಂದ ಶಿಲ್ಪ ಕಲೆಗೆ ತಮ್ಮ ಕಾರ್ಯ

ಪದ್ಧತಿಯನ್ನು ಬದಲಾಯಿಸಿದರು. ಅವರು ಕಲ್ಲಿನ ವಿಗ್ರಹಗಳನ್ನು ನಿರ್ಮಿಸಲು ತಮಗೆ ಬೇಕಾದ ಮತ್ತು ಯೋಗ್ಯವಾದ ಶಿಲೆಯನ್ನು ಕಲ್ಲು ಗಣಿಯಿಂದ ತಾವೇ ತಂದು ವಿಗ್ರಹಗಳನ್ನು ನಿರ್ಮಿಸುತ್ತಿದ್ದರು. ಇದು ಅವರಲ್ಲಿರುವ ಕಾರ್ಯ ತತ್ಪರತೆ ಮತ್ತು ದೃಢತೆಯನ್ನು ವ್ಯಕ್ತಪಡಿಸುತ್ತದೆ. ಇವರು ತಮ್ಮ ಶಿಲ್ಪ ಕಲೆಯಲ್ಲಿ ಶಿಲಾಘಾಟ್ ಮಾದರಿಯಲ್ಲೂ ಮತ್ತು ಹೊಯ್ಸಳರ ಶೈಲಿಯಲ್ಲೂ ವಿಗ್ರಹಗಳನ್ನು ನಿರ್ಮಿಸುತ್ತಿದ್ದರು. ಇವರು ಪ್ರಥಮವಾಗಿ ಶಿವಮೊಗ್ಗ ನಗರದ ರವೀಂದ್ರನಗರ ಬಡವಣೆಯಲ್ಲಿರುವ ಬಲಮುರಿ ಗಣಪತಿಯನ್ನು ಶಾಸ್ತ್ರೋಕ್ತವಾಗಿ ನಿರ್ಮಿಸಿ ಶಿವಮೊಗ್ಗ ನಗರದ ಜನತೆಯಿಂದ ಮೆಚ್ಚುಗೆಯನ್ನು ಪಡೆದಿದ್ದರು. ಈ ವಿಗ್ರಹವನ್ನು ನಿರ್ಮಿಸಿದ ನಂತರ ಇವರಿಗೆ ಸಾಕಷ್ಟು ಬೇಡಿಕೆಗಳು ಬಂದು ಇವರ ಶಿಲ್ಪ ಕಲಾ ಕ್ಷೇತ್ರವು ವಿಸ್ತಾರವಾಗಲು ಕಾರಣವಾಯಿತು. ನಂತರ ಶಿವಮೊಗ್ಗ ನಗರದ ಸಕ್ಕರೆ ಕಾರ್ಖಾನೆಯವರಿಗೆ ಕಾರ್ಖಾನೆಯಲ್ಲಿರುವ ದೇವಸ್ಥಾನಕ್ಕೆ ೪ ಅಡಿ ಎತ್ತರದ ಕಲ್ಲಿನ ವಿಗ್ರಹವನ್ನು ನಿರ್ಮಿಸಿ ಕಾರ್ಖಾನೆಯ ಆಡಳಿತ ವರ್ಗದವರಿಂದ ಪ್ರಶಂಸೆಯನ್ನು ಪಡೆದಿದ್ದರು. ಸಾಗರದ ಸಮಿಪವಿರುವ ವರದಹಳ್ಳಿ ಮಠದ ಶ್ರೀ ಶ್ರೀ ಶ್ರೀ ಶ್ರೀ ಶ್ರೀಧರ ಸ್ವಾಮಿಗಳ ದೇವಸ್ಥಾನಕ್ಕೆ ನಾಲ್ಕು ಅಡಿ ಎತ್ತರದ ಗಣಪತಿ ವಿಗ್ರಹವನ್ನು ನಿರ್ಮಿಸಿಕೊಟ್ಟಿದ್ದರು. ಶಿರಸಿ ತಾಲ್ಲೂಕು ಉಮ್ಮಳೆ ಕೊಪ್ಪ ಗ್ರಾಮದ ಹವ್ಯಕ ಜನಾಂಗದ ಇಷ್ಟಾನುಸಾರವಾಗಿ, ನಾಲ್ಕು ಅಡಿ ಎತ್ತರದ ಗಣಪತಿಯನ್ನು ನಿರ್ಮಿಸಿ ಅಲ್ಲಿಯ ಜನತೆಯ ಪ್ರೀತಿ, ವಿಶ್ವಾಸಕ್ಕೆ ಪಾತ್ರರಾಗಿದ್ದರು, ಚಿಕ್ಕಮಗಳೂರು ನಗರದ ಸಾರ್ವಜನಿಕರ ಗಣಪತಿ ದೇವಸ್ಥಾನಕ್ಕೆ ನಾಲ್ಕು ಅಡಿ ಎತ್ತರದ ಗಣಪತಿ ವಿಗ್ರಹವನ್ನು ನಿರ್ಮಿಸಿ ಕೊಟ್ಟಿದ್ದರು. ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ಪಟ್ಟಣದ ಜನತೆಯ ಅಪೇಕ್ಷೆ ಮೇರೆಗ ರೇವಣಸಿದ್ಧೇಶ್ವರ ವಿಗ್ರಹವನ್ನು ನಿರ್ಮಿಸಿಕೊಟ್ಟಿದ್ದರು. ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ಪಟ್ಟಣದ ಜನತೆಯ ಕೋರಿಕೆಯಂತೆ ೫ ಅಡಿ ಎತ್ತರದ ವೀರಾಂಜನೇಯ ವಿಗ್ರಹವನ್ನು ನಿರ್ಮಿಸಿ ಕೊಟ್ಟಿದ್ದರು. ಸಾಗರ ತಾಲ್ಲೂಕು ಬಾಳೇ ಗುಂಡಿ ಸಮಿಪವಿರುವ ದೊಡ್ಡ ಜೈಲು ಗ್ರಾಮದ ಶನೇಶ್ವರ ದೇವಸ್ಥಾನಕ್ಕೆ ಶ್ರೀಧರ ಸ್ವಾಮಿಗಳ ಯಥಾವತ್ತಾದ ಒಂದು ವಿಗ್ರಹವನ್ನು ನಿರ್ಮಿಸಿಕೊಟ್ಟಿದ್ದರು. ಉತ್ತರಕನ್ನಡ ಜಿಲ್ಲೆ ಹೊನ್ನಾವರ ತಾಲ್ಲೂಕು ಗೇರುಸೊಪ್ಪ ಗ್ರಾಮದ ಗುತ್ತಿ ಪರಮೇಶ್ವರಿ ದೇವಸ್ಥಾನಕ್ಕೆ ಪರಮೇಶ್ವರಿ ವಿಗ್ರಹವನ್ನು ನಿರ್ಮಿಸಿಕೊಟ್ಟಿದ್ದರು. ಸಾಗರದ ಗುಡಿಗಾರ ಸಮಾಜದ ಶ್ರೀ ರಾಮಚಂದ್ರ ದೇವಸ್ಥಾನಕ್ಕೆ ಶ್ರೀ ರಾಮ, ಸೀತಾ, ಲಕ್ಷ್ಮಣ ಆಂಜನೇಯ ಇವರ ವಿಗ್ರಹಗಳನ್ನು ನಿರ್ಮಿಸಿ ಕೊಟ್ಟಿದ್ದಾರೆ ಮತ್ತು ಸಾಗರದ ಕೆ. ಇ. ಬಿ. ಕಾಲೋನಿಯಲ್ಲಿರುವ ಸುಬ್ರಹ್ಮಣ್ಯ ಸ್ವಾಮಿ ದೇವಸ್ಥಾನಕ್ಕೆ ಸುಬ್ರಹ್ಮಣ್ಯ ವಿಗ್ರಹವನ್ನು ನಿರ್ಮಿಸಿ ಶಿಲ್ಪ ಕಲಾಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದರು.

**ಪ್ರಶಸ್ತಿಗಳು:**

ಶಾಂತಪ್ಪನವರು ತಮ್ಮ ಸೋದರ ಮಾವನವರಾದ ಮೂಡುಗೋಡು ಹಿರಣ್ಯಪ್ಪನವರನ್ನು, ಗುರುಗಳು, ಎಂದು ಹೇಳುತ್ತಿದ್ದರು. ಆದರೆ ಹಿರಣ್ಯಪ್ಪನವರು ಒಬ್ಬ ಮಾನಸ ಗುರುಗಳಾಗಿದ್ದರೇ ಹೊರತು ಅವರಿಂದ ಯಾವ ರೀತಿಯ ಶಿಕ್ಷಣವನ್ನಾಗಲೀ ತರಬೇತಿಯನ್ನಾಗಲೀ ಪಡೆದಿರಲಿಲ್ಲ. ಅವರನ್ನು ತಂದೆ ಸಮಾನರೆಂದೂ ಆರಾಧ್ಯ ದೇವರೆಂದೂ ಪೂಜಿಸುತ್ತಿದ್ದರು. ಇವರು ಯಾವ ಒಂದು ಕಲಾ ಶಾಲೆಯಲ್ಲಾಗಲಿ ಅಥವಾ ಯಾವ ಗುರುವಿನಿಂದಾಗಲಿ ಕಲೆಯನ್ನು ಅಭ್ಯಾಸ

ಮಾಡದೇ ಹುಟ್ಟು ಕಲಾವಿದರಾಗಿದ್ದರು. ಪ್ರಶಸ್ತಿಯನ್ನು ಪಡೆಯುವುದಕ್ಕಾಗಿಯೇ ಇವರು ಶ್ರೇಷ್ಠ ಕಲಾಕೃತಿಯನ್ನು ನಿರ್ಮಿಸಿ ಸ್ಪರ್ಧಾಕಣದಲ್ಲಿರಿಸಿ ರಾಷ್ಟ್ರ ಪ್ರಶಸ್ತಿಯನ್ನಾಗಲೀ, ರಾಜ್ಯ ಪ್ರಶಸ್ತಿಯನ್ನಾಗಲೀ ಪಡೆಯಬೇಕೆಂಬ ಆಸೆ ಅವರಿಗಿರಲಿಲ್ಲ. ಹುಟ್ಟುವಾಗಲೇ, ದೇವರ ಹುಟ್ಟು ಕಲಾವಿದ ಎಂಬ ಪ್ರಶಸ್ತಿಯನ್ನು ಕೊಟ್ಟು ಕಳುಹಿಸಿದ್ದರಿಂದ ಬೇರೆ ಯಾವ ಪ್ರಶಸ್ತಿಯನ್ನು ಸಂಪಾದಿಸಬೇಕೆಂಬ ಆಸೆ ಅವರಿಗಿರಲಿಲ್ಲ. ಅದಕ್ಕೆ ಅವರು ಪ್ರಯತ್ನವನ್ನೂ ಮಾಡಲಿಲ್ಲ. ಅವರು ಕಲೆಯ ಆರಾಧನೆಯೇ ಪ್ರಶಸ್ತಿ ಎಂದು ತಿಳಿದು ತಮ್ಮ ಜೀವನವನ್ನೇ ಸಮರ್ಪಿಸಿಕೊಂಡಿದ್ದರು. ಅವರಿಗೆ ಸಮಾಜದಲ್ಲಿ ಎಲ್ಲರೂ ಕಲಾವಿದರಾದರೆ ಎಲ್ಲರ ರಕ್ತದಲ್ಲೂ ಕಲೆಯು ಹರಿದರೆ ಅದೇ ಪ್ರಶಸ್ತಿ ಬಂದ ಹಾಗೆ ಎಂದು ತಿಳಿದಿದ್ದರು. ಅದಕ್ಕಾಗಿಯೇ ತಮ್ಮ ಮನೆಯಲ್ಲಿಯೇ, ಶ್ರೀಧರ ಕಲಾ ಮಂದಿರ, ಎಂಬ ಕಲಾ ಶಾಲೆಯನ್ನು ವರದಹಳ್ಳಿ ಮಠದ ಶ್ರೀ ಶ್ರೀ ಶ್ರೀ ಶ್ರೀಧರ ಶ್ರೀಪಾದಂಗಳವರ ಹೆಸರಿನಲ್ಲಿ ಪ್ರಾರಂಭಿಸಿ ಅನೇಕ ಶಿಷ್ಯರನ್ನು ಬೆಳೆಸಿ, ಅವರ ರಕ್ತದಲ್ಲಿ ಕಲೆಯ ಸೆಲೆಯನ್ನು ಹರಿಸಿ ಅವರ ಜೀವನಕ್ಕೆ ದಾರಿ ದೀಪವಾಗಿದ್ದರು, ಹಣ್ಣನ್ನು ಹಂಚಿಕೊಂಡು ತಿನ್ನಬೇಕೆಂಬ ಗಾದೆಯಂತೆ ಕಲೆಯನ್ನು ತಾನು ಕಲಿತು ಇತರರಿಗೂ ಕಲಿಸಿ ಇಡೀ ಸಮಾಜವೇ ಕಲಾ ಪ್ರಪಂಚವಾಗಬೇಕೆಂಬ ಉದಾರ ತತ್ವವನ್ನು ಪಾಲಿಸಿಕೊಂಡು ಬಂದಿದ್ದರು.

ಅವರ ಕಲಾ ಮಂದಿರಕ್ಕೆ ಅನೇಕ ರಾಜಕೀಯ ನಾಯಕರು ಉನ್ನತ ಮಟ್ಟದ ಅಧಿಕಾರಿಗಳು, ಸಾಹಿತಿಗಳು, ಸಾರ್ವಜನಿಕರು ಭೇಟಿಕೊಟ್ಟು, ಕಲಾ ಶಾಲೆಯ ಚಟುವಟಿಕೆಗಳನ್ನು ವೀಕ್ಷಿಸಿ ಸರಕಾರ ಸಮಾಜ, ಮತ್ತು ಸಂಘ ಸಂಸ್ಥೆಗಳು ಮಾಡಬೇಕಾಗಿದ್ದ ಜನೋಪಯೋಗಿ ಕಾರ್ಯವನ್ನು ಇವರು ಸ್ವತಹ ತಮ್ಮ ನಿರ್ವಹಣೆಯಿಂದ ಕಲಾ ಶಾಲೆಯನ್ನು ತೆರೆದು ವಿದ್ಯಾದಾನ ಮಾಡಿರುತ್ತಾರೆ ಎಂದು ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಸರಕಾರದ ಅಧಿಕಾರಿಗಳಿಂದ ಸಂಘ ಸಂಸ್ಥೆಗಳಿಂದ ಹಾಗೂ ಎಲ್ಲಾ ಸಮಾಜದ ಗಣ್ಯ ವ್ಯಕ್ತಿಗಳಿಂದ ಇವರು ಒಬ್ಬ ಶ್ರೇಷ್ಠ ಕಲಾವಿದ, ಸಾಮಾಜಿಕ ಕಳಕಳಿಯ ವ್ಯಕ್ತಿ ಹಾಗೂ ತ್ಯಾಗಜೀವಿ ಎಂದು ಪರಿಗಣಿಸಲ್ಪಟ್ಟಿದ್ದರು. ಅವರು ಯಾವ ಶ್ರೇಷ್ಠ ಕಲಾ ಕೃತಿಯನ್ನು ಸ್ಪರ್ಧೆಗೆ ಇಡದಿದ್ದರೂ ಕೂಡಾ ಸರಕಾರವೇ ಇವರ ವಿಶೇಷವಾದ ಕೌಶಲ್ಯತೆಯನ್ನು ಪರಿಗಣಿಸಿ ೧೯೯೧ನೇ ಇಸವಿಯಲ್ಲಿ ಕೆತ್ತನೆಯ ಕೆಲಸಕ್ಕೆ ರಾಜ್ಯ ಮಟ್ಟದ ನೇತಾರ ಪ್ರಶಸ್ತಿಯನ್ನು ಪ್ರಧಾನ ಮಾಡಿ ಗೌರವಿಸಿರುವುದು ಪ್ರಶಂಸನೀಯವಾದ ಸಂಗತಿ.

ಇವರು ತಮ್ಮ ಅಂತ್ಯ ಕಾಲದಲ್ಲಿ ಕಲ್ಲಿನ ವಿಗ್ರಹವನ್ನು ಮಾಡುವಾಗ ಕಲ್ಲಿನ ಚಕ್ಕೆಯ ಕಣ್ಣಿನೊಳಗೆ ತಾಕಿ ಕಣ್ಣಿನ ದೃಷ್ಟಿಯನ್ನು ಕಳೆದುಕೊಂಡು, ಸುಮಾರು ೨ ವರ್ಷಗಳ ಕಾಲ ತೊಂದರೆಯನ್ನು ಅನುಭವಿಸಿ ತಾ: ೪-೬-೧೯೯೬ನೇ ಇಸವಿಯಲ್ಲಿ ತಮ್ಮ ೮೦ನೇ ವಯಸ್ಸಿನಲ್ಲಿ ಇಹಲೋಕವನ್ನು ತ್ಯಜಿಸಿದರು. ಇವರ ಇತರ ಮಕ್ಕಳಾದ ಶ್ರೀಧರ್, ರಾಮಸ್ವಾಮಿ, ದತ್ತಾತ್ರೇಯ ಮಂಜುನಾಥ ಇವರು ಶಿಲ್ಪಕಲೆ ಮತ್ತು ಶ್ರೀಗಂಧದ ವಿಗ್ರಹಗಳನ್ನು ರಚಿಸುವಲ್ಲಿ ಶಾಂತಪ್ಪನವರು ಸ್ಥಾಪಿಸಿದ್ದ ಕಲಾಶಾಲೆಯನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ.



# ಜಡೆ ಮಂಜುನಾಥಪ್ಪ

ಜಿ. ಎಂ. ಸದಾಶಿವ

ಮಲೆನಾಡಿನ ಸೆರಗಿನಲ್ಲೆರುವ ಜಡೆ ಗ್ರಾಮವು ಸೊರಬ ತಾಲ್ಲೂಕಿನಲ್ಲಿ ಒಂದು ಮೂಲೆಯಲ್ಲೆರುವ ಚಿಕ್ಕ ಗ್ರಾಮವಾಗಿದ್ದು, ಗುಡಿಗಾರರ ೫-೬ ಕುಟುಂಬಗಳಿಗೆ ಅವಾಸಸ್ಥಾನವಾಗಿತ್ತು. ಈ ಕುಟುಂಬಗಳಲ್ಲೆ ಜಡೆ ಮಂಜುನಾಥಪ್ಪನವರು ಸಾಂಪ್ರದಾಯಕ ಕಲಾವಿದರ ಮನೆಯಲ್ಲೆ ಹುಟ್ಟಿ ಅನುವಂಶಿಕವಾಗಿ ಬಂದ ಕಲೆಯು ಇವರ ಮಕ್ಕಳಾದ ಕೊಟ್ರಪ್ಪ, ಪಾಂಡಪ್ಪ, ರಾಮಪ್ಪ ಇವರ ರಕ್ತದಲ್ಲೂ ಹರಿದಿತ್ತು. ೧೮೮೬ನೇ ಇಸವಿಯಲ್ಲೆ ಲಂಡನ್ನಿನಲ್ಲಿ ನೆಡೆದ ವಸಾಹತು ಮತ್ತು ಭಾರತೀಯ ವಸ್ತು ಪ್ರದರ್ಶನದಲ್ಲೆ ಮಂಜುನಾಥಪ್ಪನವರ ದೊಡ್ಡಪ್ಪನವರಾದ ಜಡೆ ಕೊಟ್ಟಪ್ಪನವರು ನಿರ್ಮಿಸಿದ ಶ್ರೀಗಂಧದ 'ಜೋಗಜಲಪಾತ'ದ ಕಲಾಕೃತ್ತಿಗೆ ಕಂಚಿನ ಪದಕ ಲಭಸಿದೆ. ಇವರ ತಂದೆ ಪಾಂಡಪ್ಪನವರು ಸೊರಬದಲ್ಲೆ ಹಾಲೆ ಇರುವ ಗುಡಿಗಾರ ಸಮಾಜದ ಶ್ರೀ ರಾಮಚಂದ್ರ ದೇವಾಲಯದ ಸುಂದರವಾದ ಶ್ರೀ ಸೀತಾ, ರಾಮಚಂದ್ರ, ಲಕ್ಷ್ಮಣ, ಅಂಜನೇಯರ ವಿಗ್ರಹಗಳನ್ನು ಉದಾರವಾಗಿ ನಿರ್ಮಿಸಿ ಕೊಟ್ಟಿರುವುದು ಅವರ ಪಾಂಡಿತ್ಯಕ್ಕೆ ಸಾಕ್ಷಿಯಾಗಿರುವುದಲ್ಲದೇ ಗುಡಿಗಾರ ಸಮಾಜದ ಬಾಂಧವರ ವಿಶ್ವಾಸಕ್ಕೂ ಪಾತ್ರರಾಗಿದ್ದರು. ಇವರ ಪೂರ್ವಿಕರು ಇಂಥಹ ಒಂದು ಸಾಂಪ್ರದಾಯಕ ಕಲಾವಿದರ ಮನೆತನದಲ್ಲೆ ಹುಟ್ಟೆದವರಾದ್ದರಿಂದ ಇವರ ಮನೆಯು ಆಗಿನ ಕಾಲದಲ್ಲೆ ಎಂದು ಕಲಾಶಾಲೆಯೇ ಆಗಿತ್ತು. ಶಿರ್ಶಿ, ಹೊನ್ನಾವರ ಕುಮಟಾ, ಬನವಾಸಿ, ಇತ್ಯಾದಿ ಸ್ಥಳಗಳಿಂದ ಗುಡಿಗಾರ ಸಮಾಜದ ಅನೇಕ ಬಂಧವರು ಇವರ ದೊಡ್ಡಪ್ಪ ಮತ್ತು ತಂದೆಯವರ ಕೃಪಾಶ್ರಯದಲ್ಲೆ ಕುಲ ಕಸುಬನ್ನು ಅಭ್ಯಾಸ ಮಾಡಿದ ನಿದರ್ಶನಗಳಿವೆ. ಇಂಥಹ ಒಂದು ಕಲಾವಿದರ ಮನೆತದಲ್ಲೆ ಹುಟ್ಟಿದ ಮಂಜುನಾಥಪ್ಪನವರು ಗುಡಿಗಾರ ಸಮಾಜದ ಹಾಗೂ ಕರ್ನಾಟಕ ರಾಜ್ಯದ ಮೊದಲನೆ ಪಂಕ್ತಿಯ ಕಲಾವಿದರಲ್ಲೆ ಒಬ್ಬರಾಗಿರುವುದು ಆಶ್ಚರ್ಯವೇನಲ್ಲ.

## ಜನನ

ಜಡೆ ಮಂಜುನಾಥಪ್ಪನವರು ಸೊರಬ ತಾಲ್ಲೂಕಿನ ಜಡೆ ಗ್ರಾಮದಲ್ಲೆ ತಂದೆ ಪಾಂಡಪ್ಪನವರಿಗೂ ತಾಯಿ ವರದಮ್ಮನವರಿಗೂ ಎಕೈಕಪುತ್ರಾಗಿ ತಾ ೨೬-೧-೧೯೨೦ರಲ್ಲೆ ಜನಿಸಿದರು. ಇವರ ಕುಟುಂಬವು ಅವಿಭಾಜ್ಯ ಕುಟುಂಬವಾಗಿದ್ದರಿಂದ ಇವರು ದೊಡ್ಡಪ್ಪ, ತಂದೆ, ಚಿಕ್ಕಪ್ಪನವರೆಲ್ಲರ ಪ್ರೀತಿ ವಾತ್ಸಲ್ಯಕ್ಕೆ ಪಾತ್ರರಾಗಿದ್ದು ಅವರ ಅಶ್ರಯದಲ್ಲೇ ಬೆಳೆದರು.

## ಬಾಲ್ಯ ಜೀವನ

ಅಗ ಜಡೆ ಗ್ರಾಮವು ಸೊರಬ ತಾಲ್ಲೂಕಿನಲ್ಲೆ ಒಂದು ಗ್ರಾಮವಾಗಿತ್ತು. ತಾಲ್ಲೂಕಿನಲ್ಲೆ

ಹರಿಯುವ ವರದಾನದಿಯು ಈ ಗ್ರಾಮವನ್ನು ತಾಲ್ಲೂಕು ಕೇಂದ್ರವಾದ ಸೊರಬದಿಂದ ಬೇರ್ಪಡಿಸಿ ಯಾವ ಸಂಪರ್ಕವಿಲ್ಲದೆ ಸೊರಬಕ್ಕೆ ಬಂದು ಹೋಗುವುದು ಆಗಿನ ಕಾಲದಲ್ಲೆ ಬಹಳ ಕಷ್ಟಕರವಾಗಿತ್ತು. ಅದ್ದರಿಂದ ಇವರು ತಮ್ಮ ಪ್ರಾಥಮಿಕ ವಿದ್ಯಾಭ್ಯಾಸಕ್ಕಾಗಿ ಜಡೆಯಲ್ಲಿರುವ ಪ್ರಾಥಮಿಕ ಶಾಲೆಗೆ ಸೇರಿದರು. ಇವರು ಪ್ರಾಥಮಿಕ ಶಾಲೆಯಲ್ಲೆ ಅಭ್ಯಾಸ ಮಾಡುವುದರ ಜೊತೆಯಲ್ಲೆ ತಂದೆಯವರ ಮತ್ತು ದೊಡ್ಡಪ್ಪನವರ ಹತ್ತಿರ ಕುಳಿತು ಶ್ರೀಗಂಧದ ಕೆತ್ತನೆಯ ಕಲೆಯನ್ನೂ ಅಭ್ಯಾಸ ಮಾಡತೊಡಗಿದರು. ಇವರ ತಂದೆಯವರಿಗೆ ಮಗನನ್ನು ಒಬ್ಬ ವಿದ್ಯಾವಂತನನ್ನಾಗಿ ಹಾಗೂ ಪದವೀದರನನ್ನಾಗಿ ಮಾಡಬೇಕೆಂಬ ಉತ್ಕಟವಾದ ಆಸೆಯನ್ನಿಟ್ಟುಕೊಂಡಿದ್ದರು. ಅದ್ದರಿಂದ ಅವರು ಮಗನ ನಾಲ್ಕು ವರ್ಷಗಳ ಪ್ರಾಥಮಿಕ ವಿದ್ಯಾಭ್ಯಾಸ ಮುಗಿದ ನಂತರ ಮಾಧ್ಯಮಿಕ ಶಾಲೆಯ ಅಭ್ಯಾಸಕ್ಕಾಗಿ ಹೆಚ್ಚಿನ ಸೌಲಭ್ಯವಿರುವ ತಾಲ್ಲೂಕು ಕೇಂದ್ರವಾದ ಸೊರಬಕ್ಕೆ ತಮ್ಮ ವಾಸ್ತವ್ಯವನ್ನು ಬದಲಾಯಿಸಬೇಕಾಯಿತು. ಆದರೆ ಬಾಲಕ ಮಂಜುನಾಥಪ್ಪನವರಲ್ಲೆ ಓದು ಬರಹದ ಅಭ್ಯಾಸಕ್ಕಿಂತ ಕಲಾಭ್ಯಾಸದ ಕಡೆಗೆ ಹೆಚ್ಚಿನ ಅಸ್ಥೆಯನ್ನು ತೋರಿಸುತ್ತಿದ್ದರು. ಇವರ ತಂದೆಯವರು ಕೂಡಾ ಮಗನ ಕಲೆಯ ಅಭ್ಯಾಸದ ಪ್ರಗತಿಯನ್ನು ಗಮನಿಸಿ ಕಲಾಭ್ಯಾಸಕ್ಕೆ ಪ್ರೋತ್ಸಾಹ ಕೊಡುತ್ತಿದ್ದರು. ಇವರು ಆಗಾಗ್ಗೆ ಸೊರಬದಲ್ಲಿರುವ ಗುಡಿಗಾರ ಸೊಸೈಟಿಗೆ ಹೋಗಿ ಅಲ್ಲಿಯ ಆಗಿನ ಹಿರಿಯ ಕಲಾವಿದರಿಂದ ವಿಗ್ರಹ ಮುಂತಾದ ಕೆತ್ತನೆಯ ಕೆಲಸವನ್ನು ಅಭ್ಯಾಸ ಮಾಡುತ್ತಿದ್ದರು. ಇವರು ಮಾಧ್ಯಮಿಕ ಶಾಲೆಯ ೬ನೇ ತರಗತಿಯಲ್ಲಿ ಓದುತ್ತಿದ್ದಾಗ ಸೊರಬದಲ್ಲೆ ೧೯೩೧ನೇ ಇಸವಿಯಲ್ಲೆ ತಮ್ಮ ೧೧ನೇ ವಯಸ್ಸಿನಲ್ಲೆ ತಾಲ್ಲೂಕು ಉಪಾಧ್ಯಾಯರ ಸಮ್ಮೇಳನದ ಅಂಗವಾಗಿ ಏರ್ಪಡಿಸಿದ್ದ ಒಂದು ವಸ್ತು ಪ್ರದರ್ಶನದಲ್ಲೆ ಇವರು ಒಂದು ಮಣ್ಣಿನ ಮಾಡಲ್ ಕೃತಿಯನ್ನು ರಚಿಸಿ ಪ್ರದರ್ಶನಕ್ಕೆ ಇಟ್ಟು ಬೆಳ್ಳಿಯ ಪದಕವನ್ನು ಪಡೆದುಕೊಂಡರು. ಈ ಪದಕವನ್ನು ಈಗಲ್ಲೂ ಇವರ ಮನೆಯಲ್ಲೆ ನೋಡಬಹುದು. ಈ ಒಂದು ಪ್ರಶಸ್ತಿಯು ಇವರ ಜೀವನದಲ್ಲೆ ಒಂದು ಮಹತ್ವದವಾದ ತಿರುವನ್ನು ಪಡೆದು ಕಲಾ ಪ್ರಪಂಚಕ್ಕೆ ಜೋತುಬಿದ್ದು ಶಾಲಾ ಅಭ್ಯಾಸಕ್ಕೆ ಶರಣು ಹೊಡೆಯ ಬೇಕಾಯಿತು. ಆಗ ರಾಜಮನ್ನಣೆಯನ್ನು ಪಡೆದ ಇವರ ಸೋದರಮಾವ ಗುಡಿಗಾರರ ಅಚಾರ್ಯ ಪುರುಷ ಮೂಡುಗೋಡು ಹಿರಣ್ಯಪ್ಪನವರು ಸೊರಬದಲ್ಲೆಯೇ ಇದ್ದುದರಿಂದ ಅವರ ಸಂಪರ್ಕ ಮತ್ತು ಉತ್ತೇಜನವನ್ನು ಪಡೆದು ಕಲಾಕ್ಷೇತ್ರದಲ್ಲೆ ಇನ್ನೂ ಹೆಚ್ಚಿನ ಸಾಧನೆಯನ್ನು ಮಾಡಲು ಅನುಕೂಲವಾಯಿತು.

## ಯೌವ್ವನದ ಹೊಸಿಲಲ್ಲಿ

ಕಲೆಯ ಬಗ್ಗೆ ಒಂದು ಅಧಮ್ಯವಾದ ಅಸಕ್ತಿಯು ಇವರಲ್ಲಿ ಬೆಳೆಯುತ್ತಲೇ ಇತ್ತು. ಇವರು ಕಲಾ ಪ್ರಪಂಚದಲ್ಲೆ ಒಂದು ಉನ್ನತವಾದ ಸ್ಥಾನವನ್ನು ಪಡೆಯಬೇಕೆಂಬ ಆಸೆಯನ್ನು ಇಟ್ಟುಕೊಂಡು ಶ್ರಮ ವಹಿಸುತ್ತಿದ್ದರು. ಅದಕ್ಕಾಗಿ ಮೈಸೂರಿನಲ್ಲೆರುವ ಶ್ರೀ ಜಯ ಚಾಮರಾಜೇಂದ್ರ ಕಲಾಶಾಲೆಯನ್ನು ಸೇರಿದರು. ಮೈಸೂರಿನಲ್ಲೆರುವಾಗ ಶಿಲ್ಪ ಕಲೆಯಲ್ಲೆ ಪ್ರಸಿದ್ಧರಾದ ಶ್ರೀ ಶಿಲ್ಪ ಕಲೆಯಲ್ಲೆ ಪ್ರಸಿದ್ಧರಾದ ಶ್ರೀ ಶಿಲ್ಪ ಸಿದ್ದಲಿಂಗಾಚಾರ್ಯರನ್ನು ಅಗಾಗ್ಗೆ ಬೇಟೆ ಮಾಡಿ ಅವರಿಂದ ಶಿಲ್ಪಕಲೆಯ ಬಗ್ಗೆ ಹಾಗೂ ಕೆತ್ತನೆಯ ಕೆಲಸದ ಬಗ್ಗೆ ಮಾರ್ಗದರ್ಶನವನ್ನು ಹಾಗೂ ಮಾಹಿತಿಯನ್ನು ಪಡೆಯುತ್ತಿದ್ದರು ಹಾಗೂ ಮೈಸೂರಿನ ಮೃಗಾಲಯಕ್ಕೆ ಭೇಟಿ ಕೊಟ್ಟು ಅಲ್ಲಿಯ ಪ್ರಾಣಿ ಮತ್ತು ಪಕ್ಷಿಗಳ ಹಾವಭಾವಗಳನ್ನು

ಗಮನಿಸಿ ಅದನ್ನು ಗಂಧದ ಕಲಾಕೃತಿಯಲ್ಲಿ ಪಡಿ ಮೂಡಿಸಲು ಪ್ರಯತ್ನ ಮಾಡುತ್ತಿದ್ದರು. ಇವರು ಕಲಾಭ್ಯಾದಲ್ಲಿರುವಾಗಲೇ ಗಂಧದ ಅನೇಕ ಕಲಾಕೃತಿಗಳನ್ನು ರಚಿಸಿ ತಮ್ಮ ಜೀವನ ನಿರ್ವಹಣೆಯನ್ನು ತಾವೇ ನೋಡಿಕೊಳ್ಳುತ್ತಿದ್ದರು. ಆದರೆ ದುರಾದೃಷ್ಟವಶಾತ ಮನೆಯಲ್ಲಿನ ಕೆಲವು ಸಂಸಾರಿಕ ಸಮಸ್ಯೆಗಳಿಂದ ಕಲಾಭ್ಯಾಸದ ಪೂರ್ಣ ಅವಧಿಯನ್ನು ಮುಗಿಸದೇ ಮನಹ ಸೊರಬಕ್ಕೆ ಹಿಂದಿರುಗಬೇಕಾಯಿತು.

ಆದರೆ ಅವರಲ್ಲೆ ಕಲೆಯ ಅಭ್ಯಾಸದ ಚಿಲುವೆಯು ಬತ್ತಲೆಲ್ಲ. ಆದರ ಜಲವು ದಿನದಿಂದ ದಿನಕ್ಕೆ ವೃದ್ಧಿಯಾಗುತ್ತಲೇ ಇತ್ತು. ಕೆಲವು ವರ್ಷಗಳ ನಂತರ ಇವರು ೧೯೩೯ನೇ ಇಸವಿಯಲ್ಲಿ ತಮ್ಮ ೧೯ನೇ ವಯಸ್ಸಿನಲ್ಲೆ ಸೊರಬದ ಕೆರೋಡಿ ಗಣಪತಪ್ಪನವರ ಪ್ರಥಮಪುತ್ರಿ ಸುಮಿತ್ರಾಬಾಯಿಯನ್ನು ಮದುವೆಯಾಗಿ ಗ್ರಾಹಸ್ಯ ಜೀವನಕ್ಕೆ ಕಾಲೆಟ್ಟರು. ತಮ್ಮ ವೈವಾಹಿಕ ಜೀವನದ ಕೆಲವು ವರ್ಷಗಳನ್ನು ಸೊರಬದಲ್ಲೆಯೇ ಕಳೆದರು. ಅದರೆ ತನ್ನ ಕಲಾ ಪ್ರೌಢಿಮೆಯನ್ನು ಉತ್ತುಂಗ ಶಿಖರಕ್ಕೆ ಕೊಂಡೊಯ್ಯಬೇಕಾದರೆ ಹಳ್ಳಿಯಲ್ಲಿರುವುದರಿಂದ ಸಾಧ್ಯವಾಗುವುದಿಲ್ಲವೆಂದು ತೀರ್ಮಾನಿಸಿ ಇವರು ತಮ್ಮ ಜೀವನೋಪಾಯಕ್ಕಾಗಿ ಹಾಗೂ ಕಲಾಭವೃದಿಂಗಾಗಿ ಶಿವಮೊಗ್ಗ ನಗರಕ್ಕೆ ಬಂದು ದುರ್ಗಿಗುಡಿ ಬಡಾವಣೆಯಲ್ಲಿ ಒಂದು ಚಿಕ್ಕ ಕಾರ್ಯಗಾರವನ್ನು ಪ್ರಾರಂಭಿಸಿದರು.

ಆಗ ಸ್ವಾತಂತ್ರ ಸಂಗ್ರಾಮದ ಕಾಲವಾದ್ದರಿಂದ ಇವರು ಶಿವಮೊಗ್ಗ ನಗರದಲ್ಲಿ ಅನೇಕ ಅಗಿನ ಕಾಂಗ್ರೆಸ್ ಮುಖಂಡರ ಪರಿಚಯವಾಯ್ತು. ಮಹಾತ್ಮಾ ಗಾಂಧೀಜಿಯವರ ಸತ್ಯ, ಅಹಿಂಸೆ ತ್ಯಾಗಪರ ಜೀವನವು ಇಡೀ ರಾಷ್ಟ್ರವನ್ನೇ ಪ್ರಚೋದಿಸುತ್ತದ್ದ ಕಾಲದಲ್ಲಿ ಮಂಜುನಾಥಪ್ಪನವರೂ ಕೂಡಾ ಇದರಿಂದ ಅಕರ್ಷಿತರಾಗಿ ಮಹಾತ್ಮಾಗಾಂಧೀಜಿಯವರ ಒಂದು ಪ್ರತಿಮೆಯನ್ನು ತಯಾರಿಸಲು ಪ್ರೇರೇಪಿತರಾದರು. ಇವರು ಶ್ರೀಗಂಧದಲ್ಲಿ ಗಾಂಧೀಜಿಯವರ ಒಂದು ಪ್ರತಿಮೆಯನ್ನು ರಚಿಸಲು ಪ್ರಾರಂಭಿಸಿ ನೃಜ ಪ್ರಕೃತಿಯ ಗಾಂಧೀಜಿಯವರ ಪ್ರತಿಮೆಯು ಪೂರ್ತಿಯಾದಾಗ ಶಿವಮೊಗ್ಗ ನಗರದ ಎಲ್ಲಾ ಸಾರ್ವಜನಿಕರಿಂದಲೂ ಸನ್ಮಾನಿತರಾದರು ಹಾಗೂ ಮೆಚ್ಚುಗೆಗೆ ಪಾತ್ರರಾದರು.

ಶಿವಮೊಗ್ಗ ಜಿಲ್ಲೆಯ ಆಗಿನ ಕಾಂಗ್ರೆಸ್ ಮುಖಂಡರಾದ ಶ್ರೀ ಎ. ಆರ್. ಬದರಿ ನಾರಾಯಣರವರು ಇವರಿಗೆ ಪ್ರೋತ್ಸಾಹ ನೀಡಿ ಇವರು ರಚಿಸಿದ ಮಹಾತ್ಮಾ ಗಾಂಧೀಜಿಯವರ ಪ್ರತಿಮೆಯ ಹೆಚ್ಚು ಪ್ರಚಾರಗೊಳ್ಳಲು ಸಹಾಯಕರಾದರು. ಆಗಿನ ಮುಖ್ಯ ಮಂತ್ರಿಗಳಾದ ದಿ : ಕೆಂಗಾಲ್ ಹನುಮಂತಯ್ಯನವರು, ಕಾಂಗ್ರೆಸ್‌ನಾಯಕರಾದ ಅರ್. ಅರ್. ದಿವಾಕರ್‌ರವರು, ಬಾಬು ರಾಜೇಂದ್ರ ಪ್ರಸಾದ, ರಾಜಗೋಪಾಲಾಚಾರಿ ಇನ್ನೂ ಅನೇಕ ರಾಜಕೀಯ ನಾಯಕರು ಗಾಂಧೀಜಿಯವರ ಪ್ರತಿಮೆಯನ್ನು ನೋಡಿ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದರು. ಇವರು ನಿರ್ಮಿಸಿದ ಅನೇಕ ಅಮೂಲ್ಯವಾದ ಶ್ರೀಗಂಧದ ಕಲಾಕೃತಿಗಳನ್ನು ಭಾರತ ಸರ್ಕಾರದವರು ಕ್ರಯಕ್ಕೆ ಕೊಂಡು ಭಾರತಕ್ಕೆ ಭೇಟಿ ನೀಡಿದ ರಷ್ಯಾ, ಅಮೇರಿಕಾ ಇಂಗ್ಲೇಂಡ್, ಫ್ರಾನ್ಸ್ ಮುಂತಾದ ದೇಶಗಳ ನಾಯಕರಿಗೆ ಕಾಣಿಕೆಯಾಗಿ ನೀಡಿರುತ್ತಾರೆ.

ಈಗಾಗಲೇ ಹೇಳಿರುವಂತೆ ಇವರು ನಿರ್ಮಿಸಿದ ಶ್ರೀಗಂಧದ ಗಾಂಧೀಜಿಯವರ ಪ್ರತಿಮೆಯು ದೇಹಲಿಯಲ್ಲಿ ಬಹಳ ಮೆಚ್ಚುಗೆ ಪಡೆದು, ಅಧರ ಪ್ರಭಾವದಿಂದ ಅಂದಿನ ರಾಜಕೀಯ ನಾಯಕರು ಹಾಗೂ ಅಧಿಕಾರಿಗಳು ೧೯೫೭ನೇ ಇಸವಿಯ ಸುಮಾರಿನಲ್ಲಿ ಸಾಗರ, ಸೊರಬ, ಶಿಕಾರಿಪುರ

ತಾಲ್ಲೂಕುಗಳನ್ನೊಳಗೊಂಡ ಕೇಂದ್ರ ಸರ್ಕಾರದ ವತಿಯಿಂದ ಪ್ರಾರಂಭವಾದ ಪ್ರಾಯೋಗಿಕ ಕಮ್ಯುನಿಟ್ ಪ್ರಾಜೆಕ್ಟಿನಲ್ಲಿ ಇವರನ್ನು ಶ್ರೀಗಂಧದ ಕೆತ್ತನೆಯ ಕೆಲಸದ ಡಿಸೈನರ್ ಹುದ್ದೆಗೆ ನೇಮಿಸಿದ್ದರು. ಆಗ ಇವರು ಶಿವಮೊಗ್ಗಾದಿಂದ ಸಾಗರಕ್ಕೆ ಬಂದು ನೆಲೆಸಿದರು. ತದನಂತರ ಸಾಗರದಲ್ಲಿ ಸುಭಾಷ್‌ನಗರದ ಬಡಾವಣೆಯಲ್ಲಿ ಒಂದು ನಿವೇಶನವನ್ನು ಕೊಂಡು ಸ್ವಂತ ಮನೆಯನ್ನು ಕಟ್ಟಿಕೊಂಡು ತಮ್ಮ ಇಬ್ಬರು ಹೆಣ್ಣುಮಕ್ಕಳೊಂದಿಗೆ ಜೀವನ ನಿರ್ವಹಿಸಿ, ಈಗ ಪತ್ನಿಯೊಂದಿಗೆ ತಮ್ಮ ಮುಂದಿನ ವಿಶ್ರಾಂತಿ ಜೀವನವನ್ನು ಕಳೆಯುತ್ತಿದ್ದಾರೆ.

## ಸರ್ಕಾರಿ ಸೇವೆಗಳು

ಈಗಾಗಲೇ ಹೇಳಿರುವಂತೆ ಕೇಂದ್ರ ಸರ್ಕಾರದವರು ೧೯೫೬ನೇ ಇಸವಿಯಲ್ಲಿ, ಸಾಗರ, ಸೊರಬ, ಶಿಕಾರಿಪುರ ತಾಲ್ಲೂಕುಗಳನ್ನೊಳಗೊಂಡ ಪ್ರಾಯೋಗಿಕ ಸಾಮೂಹಿಕ ವಿಕಾಸ ಯೋಜನೇ ಕಮ್ಯುನಿಟ್ ಪ್ರಾಜೆಕ್ಟಿಯಲ್ಲೆ ಇವರನ್ನು ಶ್ರೀಗಂಧದ ಕೆತ್ತನೆಯ ಕೆಲಸದ ಡಿಸೈನರ್ ಹುದ್ದಗೆ ನೇಮಿಸಿದರು. ಸದರಿ ಹುದ್ದೆಯು ಕೇವಲ ೩ ವರ್ಷದ ಅವಧಿಗೆ ಮಂಜೂರಾದ್ದರಿಂದ ಯೋಜನೆಯನ್ನು ಮುಚ್ಚಿದಾಗ ಇವರೂ ಕೂಡಾ ತಮ್ಮ ಕೆಲಸವನ್ನು ಕಳೆದುಕೊಂಡರು. ಆದರೆ ಕರ್ನಾಟಕ ಸರ್ಕಾರದವರು ಇವರ ಪ್ರತಿಭೆಯನ್ನು ಆಗಲೇ ಗುರುತಿಸಿದ್ದರಿಂದ ಇವರ ಸೇವೆಯನ್ನು ಪುನಹ ಪಡೆಯುವ ಉದ್ದೇಶದಿಂದ ಇವರನ್ನೂ ಕುಮಟಾ ಹಾಗೂ ಸಾಗರದಲ್ಲಿರುವ ಶ್ರೀಗಂಧದ ವಸ್ತುಗಳ ತಯಾರಿಕೆ ಕೇಂದ್ರಗಳಲ್ಲಿ ವಿವಿಧ ಹುದ್ದೆಗಳಿಗೆ ನೇಮಿಸಿ ಇವರ ಅಮೂಲ್ಯವಾದ ಸೇವೆಯನ್ನು ಪಡೆದಿರುತ್ತಾರೆ. ತಮ್ಮ ಸರಕಾರಿ ಸೇವೆಯಲ್ಲಿ ನೆಮ್ಮದಿಯೆಂದ ಸೇವೆಯನ್ನು ನಿರ್ವಹಿಸಿ ನಿವೃತ್ತಿ ವಯಸ್ಸನ್ನು ತಲುಪಿದ ನಂತರ ನಿವೃತ್ತಿ ಹೊಂದಿ ವಿಶ್ರಾಂತಿ ಜೀವನವನ್ನು ಕಳೆಯುತ್ತಿದ್ದಾರೆ. ಅದರೆ ಪುನಹ ಸರಕಾರದವರು ಇವರನ್ನು ಸಾಗರದ ಶ್ರೀಗಂಧದ ಸಂಕೀರ್ಣದಲ್ಲೆ ಗೌರವಧನದ ಅಧಾರದ ಮೇಲೆ ಗುಣಮಟ್ಟ ಹತೋಟಿ ಮತ್ತು ಮೌಲ್ಯಮಾಪನದ ಅಧಿಕಾರಿಯನ್ನಾಗಿ ನೇಮಿಸಿ ಇವರ ಅಮೂಲ್ಯವಾದ ಸೇವೆಯನ್ನು ಪಡೆಯುತ್ತಿದ್ದಾರೆ.

## ಇವರ ಕಲಾಕೃತಿಗಳು ಮತ್ತು ಪ್ರಶಸ್ತಿಗಳು

ಇವರು ತಮ್ಮ ಕಲಾಭ್ಯಾಸದಲ್ಲಿ ಹಂತಹಂತವಾಗಿ ಒಂದೊಂದು ಮೆಟ್ಟಿಲನ್ನು ಎರುತ್ತಾ ತಾಲ್ಲೂಕು, ಜಿಲ್ಲೆ, ರಾಜ್ಯ ಹಾಗೂ ರಾಷ್ಟ್ರಮಟ್ಟದಲ್ಲಿ ಪ್ರಶಸ್ತಿಗಳನ್ನುಗಳಿಸುತ್ತಾ ಬಂದಿರುತ್ತಾರೆ. ಇವರು ಶಿವಮೊಗ್ಗದಲ್ಲೆರುವಾಗ ಮೈಸೂರಿನ ಅರಮನೆ ವಿದ್ವಾಂಸರಾಗಿದ್ದ ಶ್ರೀ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಯವರ ಪರಿಚಯವಾಗಿ ಅವರಿಂದ ಗೀತೋಪದೇಶ ಕೃತಿಯನ್ನು ನಿರ್ಮಿಸಲು ಪ್ರೇರೇಪಿತರಾಗಿ ಮೊತ್ತ ಮೊದಲ ಬಾರಿಗೆ ೧೯೪೯ನೇ ಇಸವಿಯಲ್ಲಿ ಶ್ರೀಗಂಧದ ದೀತೋಪದೇಶ ಕೃತಿಯನ್ನು ನಿರ್ಮಿಸಿದರು.

ಶ್ರೀ ಕೃಷ್ಣ ಮಹಾಭಾರತ ಇತಿಹಾಸದ ಕೇಂದ್ರ ಬಿಂದು. ಅರ್ಜುನನಿಗೆ ಉಪದೇಶ ಕೊಡುವ ಮೂಲಕ ಪ್ರತಿಯೊಬ್ಬ ಮಾನವನ ಬದುಕಿಗೂ ಸ್ಫೂರ್ತಿದಾಯಕ ಮಾರ್ಗದರ್ಶನ ನೀಡುವ ದೇವತಾ ಮನುಷ್ಯ. ಈ ಮಹಾ ಇತಿಹಾಸ ಕಾವ್ಯ "ಮಹಾ ಭಾರತ"ದಲ್ಲಿ ಎದ್ದು ಕಾಣುವ ಅತ್ಯಂತ ಶ್ರೇಷ್ಠವಾದ ಮಹಾ ಪುರುಷ ಹಾಗೂ ಭಗವದ್ಗೀತೆಯನ್ನು ಜಗತ್ತಿಗೆ ನೀಡಿದ ಮಹಾ

ತತ್ವಜ್ಞಾನಿಯಾದ ಶ್ರೀ ಕೃಷ್ಣನ ವ್ಯಕ್ತಿತ್ವವನ್ನು ಹಾಗೂ ನಾಲ್ಕು ವೇದಗಳನ್ನು ಬಿಂಬಿಸುವ ನಾಲ್ಕು ಕುದುರೆಗಳಿಂದ ಎಳೆಯಲ್ಪಡುವ ರಥವನ್ನು ಹಾಗೂ ವೀರಗಾಸಿ, ಭುಜಕೀರೀಟ, ಪಾದುಕೆ, ಡಾಲು, ಕತ್ತಿ, ಬಾಣ ಮುಂತಾದ ಯುದ್ಧ ಭೂಷ್ಣ ಪ್ರಾಯವಾದ ವೇಷವನ್ನೊಳಗೊಂಡ ಅರ್ಜುನನ ವ್ಯಕ್ತಿತ್ವವನ್ನು ಶಾಸ್ತ್ರೋಕ್ತವಾಗಿ ಹಾಗೂ ಅತ್ಯಂತ ಕಲಾತ್ಮಕವಾಗಿ ಕೃತಿಗಿಳಿಸಿದ್ದಾರೆ. ಈ ಮೇರು ಕೃತಿಯು ಕರ್ನಾಟಕ ರಾಜ್ಯ, ಭಾರತ ದೇಶ ಹಾಗೂ ಹೊರದೇಶಗಳಲ್ಲೂ ಪ್ರದರ್ಶಿಸಲ್ಪಟ್ಟು ಈಗ ವಿಶ್ವಸಂಸ್ಥೆಯ ಸಭಾಭವನದಲ್ಲಿ ರಾರಾಜಿಸಲ್ಪಡುತ್ತಿದೆ. ಇವರ ಹೆಸರು ಶಾಶ್ವತವಾಗಿ ಪ್ರಜ್ವಲಿಸುವುದರಲ್ಲಿ ಸಂದೇಹವಿಲ್ಲ.

ಈಗಾಗಲೇ ಹೇಳಿರುವಂತೆ ಇವರು ನಿರ್ಮಿಸಿದ ಶ್ರೀಗಂಧದ ಮಹಾತ್ಮಾ ಗಾಂಧೀಜಿಯವರ ನೈಜ ಪ್ರತಿಮೆಯು ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಅನೇಕ ರಾಜಕೀಯ ಮುಖಂಡರಿಂದ ಹಾಗೂ ಸಾರ್ವನಿಕರಿಂದ ಮೆಚ್ಚುಗೆಯನ್ನು ಪಡೆಯಿತು. ಸ್ವಾತಂತ್ರನಂತರ ಬೆಂಗಳೂರಿನ ಸಿಟಿ ಮುನ್ಸಿಫಲ ಸಮಿತಿಯವರು ಭಾರತದ ಪ್ರಥಮ ಪ್ರಧಾನಿಯಾದ ಸಮಯದಲ್ಲಿ ಪಂಡಿತ ಜವಾಹರಲಾಲ್ ನೆಹರೂರವರನ್ನು ೧೯೪೮ನೇ ಇಸವಿಯಲ್ಲೆ ಸನ್ಮಾನಿಸಿ ಮಂಜುನಾಥಪ್ಪನವರು ನಿರ್ಮಿಸಿದ ಗಾಂಧೀಜಿಯುವರ ಪ್ರತಿಮೆಯನ್ನು ಕಾಣಿಕೆಯಾಗಿ ನೀಡಿ ಗೌರವಿಸಿದರು. ಆಗ ಮಂಜುನಾಥಪ್ಪನವರಿಗೂ ಕೂಡಾ ಈ ಸಮಾರಂಭದಲ್ಲಿ ಭಾಗಿಯಾಗಲು ಒಂದು ವಿಶೇಷವಾದ ಅಹ್ವಾನ ಪತ್ರಿಕೆಯನ್ನು ಬೆಂಗಳೂರು ಸಿಟಿ ಮುನ್ಸಿಫಲ್ ಸಮಿತಿಯವರು ಕಳುಹಿಸಿಕೊಟ್ಟು ಇವರನ್ನು ಕರೆಯಸಿಕೊಂಡು ಪ್ರದಾನಿಯವರಿಗೆ ಪರಿಚಯ ಮಾಡಿಕೊಟ್ಟು ಅವರಿಂದ ಪ್ರಶಂಸೆಯನ್ನು ಪಡೆದಿದ್ದರು, ಅಲ್ಲದೇ ಈ ಕೃತಿಯ ಪೋಟೋ ಕಾಪಿಯ ಮೇಲೆ ನೆಹರೂರವರು ತಮ್ಮ ಹಸ್ತಾಕ್ಷರವನ್ನು ಬರೆದಿರುತ್ತಾರೆ.

ದೇಹಲಿಯಲ್ಲಿ ೧೯೪೯ನೇ ಇಸವಿಯಲ್ಲಿ ನಡೆದ ಪೂಜ್ಯ ಗಾಂಧೀಜಿಯವರ ಪ್ರಥಮ ಪುಣ್ಯ ತಿಥಿಯಲ್ಲಿ ಅಂಗವಾಗಿ ಏರ್ಪಡಿಸಿದ್ದ ಒಂದು ವಸ್ತು ಪ್ರದರ್ಶನದಲ್ಲಿ ಇವರು ರಚಿಸಿದ ಗಾಂಧೀಜಿಯವರ ಪ್ರತಿಮೆಯು ಪ್ರದರ್ಶಿಸಲ್ಪಟಿತ್ತು. ಲಕ್ಷಾಂತರ ಜನರು ಗಾಂಧೀಜಿಯವರ ಪ್ರತಿಮೆಯನ್ನು ನೋಡಿ ಮೆಚ್ಚುಗೆ ವ್ಯಕ್ತಪಡಿಸಿರುತ್ತಾರೆ. "ಎಂದು ಪ್ರಧಾನ ಮಂತ್ರಿಯವರ ಕಾರ್ಯಾಲಯದಿಂದ ಬಂದ ಒಂದು ಅಭಿನಂದನಾ ಪತ್ರದಿಂದ ವ್ಯಕ್ತವಾಗುತ್ತದೆ ಹಾಗೂ ಇನ್ನು ಕೆಲವು ಕೃತಿಗಳನ್ನು ಕಳುಹಿಸಿಕೊಡಲು ತಿಳಿಸಿ ಪತ್ರ ಬರೆದಿರುತ್ತಾರೆ. ಇದು ಇವರ ಕಲಾ ಪಾಂಡಿತ್ಯವು ಎಷ್ಟು ಎತ್ತರಕ್ಕೆ ಬೆಳೆದಿದೆ ಎಂಬುದಕ್ಕೆ ಸಾಕ್ಷಿಯಾಗಿದೆ. ಇವರು ರಚಿಸಿದ ಗಾಂಧೀಜಿಯ ಪ್ರತಿಮೆಯು ಈಗ ದೇಹಲಿಯ ರಾಷ್ಟ್ರಪತಿ ಭವನದ ವಸ್ತು ಸಂಗ್ರಹಾಲಯದಲ್ಲಿ ರಾರಾಜಿಸುತ್ತಿದೆ.

೧೯೪೭ನೇ ಇಸವಿಯಲ್ಲಿ ಶಿವಮೊಗ್ಗದಲ್ಲಿ ಶಿವಮೊಗ್ಗ ಜಿಲ್ಲಾ ಪರಿಷತವತಿಯಿಂದ ಏರ್ಪಡಿಸಿದ್ದ ಸಮ್ಮೇಳನದಲ್ಲಿ ಇವರ ಒಂದು ಗಂಧದ ಕೃತಿಗೆ ಬೆಳ್ಳಿ ಬಟ್ಟಲು ಕೊಟ್ಟಿರುತ್ತಾರೆ. ೧೯೫೪ರಲ್ಲಿ ಶಿವಮೊಗ್ಗದಲ್ಲಿ ಅಖಿಲಭಾರತ ಮಲೆನಾಡು ಸಮ್ಮೇಳನದಲ್ಲಿ ಏರ್ಪಡಿಸಿದ್ದ ವಸ್ತು ಪ್ರದರ್ಶನದಲ್ಲಿ ಇವರ ಒಂದು ಗಂಧದ ಕೃತಿಗೆ ಪ್ರಥಮ ಬಹುಮಾನ ಲಭಿಸಿರುತ್ತದೆ.

೧೯೫೦ನೇ ಇಸವಿಯಲ್ಲಿ ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ ಇವರ ಗಾಂಧೀಜಿ ಪ್ರತಿಮೆಗೆ ಅಖಿಲಭಾರತ ಲಲಿತ ಕಲಾ ಅಕಾಡೆಮಿಯವರು ಚಿನ್ನದ ಪದಕವನ್ನು ನೀಡಿ

ಗೌರವಿಸಿರುತ್ತಾರೆ ಹಾಗೂ ಸದರಿ ವಸ್ತು ಪ್ರದರ್ಶನದಲ್ಲಿ ಇವರು ರಚಿಸಿದ ಗೀತೋಪದೇಶ ಕೃತಿಯನ್ನು ಗುಡಿಗಾರರ ಸೊಸೈಟಿಯ ಮೂಲಕ ಕಳುಹಿಸಿ ಅಕೃತಿಗೂ ಕೂಡಾ ಚಿನ್ನದ ಪದಕವನ್ನುಗಳಿಸಿರುತ್ತಾರೆ. ೧೯೫೧ನೇ ಇಸವಿಯಲ್ಲಿ ಧರ್ಮಸ್ಥಳದಲ್ಲಿ ಜರುಗಿದ ಮಹಾ ನಡುವಳಿ ವಸ್ತು ಪ್ರದರ್ಶನದಲ್ಲಿ ಇವರ ಒಂದು ಗಂಧದ ಕೃತಿಗೆ ಚಿನ್ನದ ಪದಕವನ್ನು ನೀಡಿ ಗೌರವಿಸಿರುತ್ತಾರೆ. ೧೯೯೧ನೇ ಇಸವಿಯಲ್ಲಿ ಇವರು ರಚಿಸಿದ ಶ್ರೀಗಂಧದ ನಾಟ್ಯ ಗಣಪತಿ ವಿಗ್ರಹಕ್ಕೆ ಕರ್ನಾಟಕ ರಾಜ್ಯ ಸರ್ಕಾರವು ರಾಜ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿರುತ್ತಾರೆ. ೧೯೯೫ನೇ ಇಸವಿಯಲ್ಲಿ ಇವರು ಕಲಾ ಕ್ಷೇತ್ರದಲ್ಲಿ ನೆಲ್ಲೆಸಿದ ಸೇವೆಯನ್ನು ಗುರುತಿಸಿ ಮೈಸೂರಿನ ರಾ ಮನಸ್ ಕಲಾ ಪ್ರತಿಷ್ಠಾನದವರು 'ಶಿಲ್ಪಶ್ರೀ' ಪ್ರಶಸ್ತಿಯನ್ನು ನೀಡಿ ಗೌರವಿಸಿರುತ್ತಾರೆ. ತಾ : ೧-೧೧-೮೪ರಲ್ಲಿ ಸಾಗರದ ಪುರಸಭೆಯವರು ಕನ್ನಡ ರಾಜ್ಯೋತ್ಸವದ ೨೮ನೇ ವಾರ್ಷಿಕೋತ್ಸವದ ನೆನಪಿಗಾಗಿ ಶ್ರೀ ಮಂಜುನಾಥಪ್ಪನವರಿಗೆ ಪೌರಸನ್ಮಾನವನ್ನು ನೀಡಿ ಅತ್ಯಂತ ಅದರದಿಂದ ಗೌರವಿಸಿರುತ್ತಾರೆ.

ಈ ಮಧ್ಯೆ ಇವರು ಅನೇಕ ಕಲ್ಲಿನ ವಿಗ್ರಹಗಳನ್ನು ನಿರ್ಮಿಸಿ ಶಿಲ್ಪ ಕಲಾ ಕ್ಷೇತ್ರವನ್ನು ಶ್ರೀಮಂತಗೊಳಿಸಿರುತ್ತಾರೆ. ಇವರು ಶಿವಮೊಗ್ಗ ಸಮೀಪವಿರುವ ನವುಲೆ ಗ್ರಾಮದಲ್ಲಿರುವ ಚಾಮುಂಡೇಶ್ವರಿ ದೇವಸ್ಥಾನಗಳ ಚಾಮುಂಡೇಶ್ವರಿ ವಿಗ್ರಹವನ್ನು ನಿರ್ಮಿಸಿ ಕೊಟ್ಟಿರುತ್ತಾರೆ. ಸಾಗರದ ರಾಜಗುರು ಕಲ್ಯಾಣ ಮಂಟಪದ ವೀರಭದ್ರಸ್ವಾಮಿ ದೇವಸ್ಥಾನಕ್ಕೆ ವೀರಭದ್ರ ಸ್ವಾಮಿ ವಿಗ್ರಹವನ್ನು ನಿರ್ಮಿಸಿಕೊಟ್ಟಿರುತ್ತಾರೆ.

ಸಾಗರ ತಾಲ್ಲೂಕು ಸಾಸಾರವಳ್ಳಿ ಗ್ರಾಮಕ್ಕೆ ಶಕ್ತಿ ಗಣಪತಿ ವಿಗ್ರಹವನ್ನು ನಿರ್ಮಿಸಿ ಕೊಟ್ಟಿರುತ್ತಾರೆ. ಸಾಗರದ ಸುಭಾಶ್ ನಗರದ ಮಡಿವಾಳ ಮಾಚಯ್ಯ ದೇವಸ್ಥಾನಕ್ಕೆ ನೈಜಪ್ರಕೃತಿಯ ಮಾಚಯ್ಯ ವಿಗ್ರಹವನ್ನು ನಿರ್ಮಿಸಿಕೊಟ್ಟಿರುತ್ತಾರೆ.

ಸಾಗರದ ಗಣಪತಿ ದೇವಸ್ಥಾನದಲ್ಲಿ ಮುರಳೀಧರ ವಿಗ್ರಹವನ್ನು ರಚಿಸಿಕೊಟ್ಟಿರುತ್ತಾರೆ.

ಸೊರಬ ತಾಲ್ಲೂಕು ಅನವಟ್ಟಿಯಲ್ಲಿ ಹನುಮಂತನ ದೇವಸ್ಥಾನಕ್ಕೆ ಹನುಮಂತನ ವಿಗ್ರಹವನ್ನು ನಿರ್ಮಿಸಿ ಕೊಟ್ಟಿರುತ್ತಾರೆ. ಸೊರಬ ತಾಲ್ಲೂಕು ನಿಸರಾಣಿ ಗ್ರಾಮದ ಲಕ್ಷ್ಮೀನಾರಾಯಣ ದೇವಸ್ಥಾನಕ್ಕೆ ಲಕ್ಷ್ಮೀನಾರಾಯಣ ವಿಗ್ರಹವನ್ನು ನಿರ್ಮಿಸಿಕೊಟ್ಟಿರುತ್ತಾರೆ.

ಸಾಗರ ತಾಲ್ಲೂಕು ಬಂದಗದ್ದೆ ಗ್ರಾಮದ ಲಕ್ಷ್ಮೀನಾರಾಯಣ ದೇವಸ್ಥಾನಕ್ಕೆ ಲಕ್ಷ್ಮೀನಾರಾಯಣ ವಿಗ್ರಹವನ್ನು ನಿರ್ಮಿಸಿಕೊಟ್ಟಿರುತ್ತಾರೆ. ಶಿವಮೊಗ್ಗದ ದೇವಸ್ಥಾನವೊಂದಕ್ಕೆ ಅಮೃತಶಿಲೆಯಲ್ಲಿ ಗೋಪಾಲಕೃಷ್ಣ ವಿಗ್ರಹವನ್ನು ನಿರ್ಮಿಸಿಕೊಟ್ಟಿರುತ್ತಾರೆ.

ಹಾಸನ ಜಿಲ್ಲೆ ಬೇಲೂರಿನಲ್ಲಿ ಕನ್ನಿಕಾ ಪರಮೇಶ್ವರಿ ದೇವಸ್ಥಾನಕ್ಕೆ ೫ ಅಡಿ ಎತ್ತರದ ಕನ್ನಿಕಾಪರಮೇಶ್ವರಿ ವಿಗ್ರಹವನ್ನು ನಿರ್ಮಿಸಿಕೊಟ್ಟಿರುತ್ತಾರೆ ಹಾಗೂ ಚೆನ್ನ ಕೇಶವ ವಿಗ್ರಹವನ್ನು ಬೇಲೂರಿನ ಕಾಫಿ ಪ್ಲಾಂಟರ್ ಒಬ್ಬರಿಗೆ ನಿರ್ಮಿಸಿಕೊಟ್ಟಿರುತ್ತಾರೆ ಇತ್ತೀಚೆಗೆ ೧೯೯೯ನೇ ಇಸವಿಯಲ್ಲಿ ಶಿಲ್ಪ ಕಲಾ ಅಕಾಡೆಮಿಯವರು ಇವರು ಕಲಾ ಸೇವೆಯನ್ನು ಗುರುತಿಸಿ ಪ್ರಶಸ್ತಿಯನ್ನು ನೀಡಿ ಗೌರವಿಸಿರುತ್ತಾರೆ.



# ಜಿ. ಡಿ. ಮಯಾಚಾರ್ಯ

ವಿರೂಪಾಕ್ಷ ಬಡಿಗೇರ

ವಾಸ್ತುಶಿಲ್ಪವೆಂದೊಡನೆ ಬಾದಾಮಿ ಚಾಲುಕ್ಯರ ಅಮರ ಶಿಲ್ಪ ಸ್ಮಾರಕಗಳು ನಮ್ಮ ಕಣ್ಣೆದುರಿಗೆ ಬರುತ್ತವೆ. ಈ ಚಾಲುಕ್ಯನಾಡಿನ ಪರಿಸರದಲ್ಲಿ ಅರಳಿದ ಈ ಶತಮಾನದ ಶಿಲ್ಪಿ ಶ್ರೀ ಗುಂಡಪ್ಪ ದೇವೇಂದ್ರಪ್ಪ ಮಯಾಚಾರ್ಯ. ತೀರ ಸರಳ ಸುಂದರ ಬದುಕು ಸಾಗಿಸುತ್ತ ಸಾವಿರಾರು ವೈವಿಧ್ಯಮಯ ಶಿಲ್ಪಗಳನ್ನು ರಚಿಸಿರುವ ಇವರ ಬದುಕೇ ಒಂದು ವಿಸ್ಮಯ ಹಾಗೂ ಕುತೂಹಲಕಾರಿ. ಯಾವ ಗುರುವಿನಿಂದಲೂ ಶಿಲ್ಪಶಾಸ್ತ್ರ ಕುರಿತು ಒಂದಕ್ಷರವನ್ನೂ ಹೇಳಿಸಿಕೊಳ್ಳದೇ ತಮ್ಮದೇ ಪರಿಶ್ರಮ, ಶ್ರದ್ಧೆ, ಸಾಧನೆಗಳ ಮಾತ್ರದಿಂದ ರಾಜ್ಯ ಮಟ್ಟದ ಹಲವು ಪ್ರಶಸ್ತಿ ಗೌರವಗಳೊಂದಿಗೆ ಕಳೆದ ವರ್ಷದ ಕರ್ನಾಟಕ ಸರ್ಕಾರದ ಅತ್ಯುನ್ನತ ಪ್ರಶಸ್ತಿಯಾದ ಜಕಣಾಚಾರಿ ಪ್ರಶಸ್ತಿ ಗೌರವವನ್ನು ಪಡೆದುದು ಅಶ್ಚರ್ಯವೆನಿಸಿದರೂ ಸತ್ಯವಾದ ಸಂಗತಿ. ತೀರ ಬಡತನದ ದಯನೀಯ ಸ್ಥಿತಿಯಲ್ಲಿ ಹೊಸ ತಿರುವನ್ನು ಹೊಂದಿದ ಶಿಲ್ಪಿ ಮಯಾಚಾರ್ಯರದು ವಿಶಿಷ್ಟ ತನದ ವ್ಯಕ್ತಿತ್ವ.

ಉತ್ತರ ಕರ್ನಾಟಕ 'ಬಾಗಲಕೋಟೆ' ಸುಪ್ರಸಿದ್ಧವಾದ ವ್ಯಾಪಾರಿ ಕೇಂದ್ರ. ರಾಯಚೂರು - ಬೆಳಗಾವಿ ಮಾರ್ಗದಲ್ಲಿ ಬಾಗಲಕೋಟೆಗೆ ಬಂದರೆ, ಶಿರೂರ್‌ನಾಕಾ ಹತ್ತಿರದ ರೈಲ್ವೇಗೇಟ್ ಪಕ್ಕದಲ್ಲಿ ಶಿಲ್ಪಿಗುಂಡಪ್ಪನವರ ಕಾರ್ಯಕ್ಷೇತ್ರ "ಭುವನ ಶಿಲ್ಪಕಲಾಶಾಲೆ" ನಮಗೆ ಕಾಣಸಿಗುತ್ತದೆ. ಕೆಲವು ಆಧುನಿಕ ಕಟ್ಟಡಗಳ ಸುತ್ತಲಿನ ಆಶ್ರಮ ವಾತಾವರಣದಲ್ಲಿ ಕಲ್ಲು ಕೆತ್ತುವ ಸದ್ದು ಯಂತ್ರಗಳ ಸಪ್ಪಳ ಕೇಳುತ್ತದೆ. ಜಿಂಕೆ, ಸಾಕು ಪ್ರಾಣಿಗಳ ಓಡಾಟ ಕಾಣಸಿಗುತ್ತದೆ. ಹಕ್ಕಿ ಪಕ್ಷಿಗಳ ಇಂಚರ, ಗಿಡಮರಗಳ ತಿಟ್ಟೆಯಲ್ಲಿ ನಾವು ಪ್ರವೇಶಮಾಡಿ ಒಳಹೋದರೆ ತಮ್ಮ ನಿತ್ಯ ಕಾಯಕದಲ್ಲಿ ನಿರತರಾಗಿರುವ ಕೃಷ್ಣವರ್ಣದ ಬೋಳು ನೆತ್ತಿಯ, ಬರಿಮೈಯಲ್ಲಿ ಕುಳಿತು ಮಿಂಚಿನ ವೇಗದಲ್ಲಿ ಶಿಲ್ಪ ರಚನಾಕಾರ್ಯದಲ್ಲಿರುವ ವ್ಯಕ್ತಿಯೇ ಎಪ್ಪತ್ತೈದರ ಪ್ರಾಯದಲ್ಲಿರುವ ಇಪ್ಪತ್ತೈದರ ಉತ್ಸಾಹಿ ಶ್ರೀ ಗುಂಡಪ್ಪ ಶಿಲ್ಪಿಯವರು. ಇವರ ಕಾರ್ಯಕೌಶಲ್ಯ ಮೆಚ್ಚುವಂತಹದು.

## ಬೆಳೆಯುಸಿರಿ

ಶಿಲ್ಪಿ ಗುಂಡಪ್ಪ ಮಯಾಚಾರ್ಯರು ಜನಿಸಿದ್ದು ೧೯ನೇ ಡಿಸೆಂಬರ್ ೧೯೨೫ರಂದು. ಬಾಗಲಕೋಟೆ ಸಮೀಪದ ಪುಟ್ಟಗ್ರಾಮ ಹೆರಕಲ್ಲಿನ ವಿಶ್ವಕರ್ಮ ಮನೆತನದ ದೇವೇಂದ್ರಪ್ಪ-ಲಕ್ಷ್ಮಮ್ಮನವರ ಪುತ್ರರಾಗಿ ಜನಿಸಿದ ಇವರು ಬಾಲ್ಯದಲ್ಲಿ ಅನುಭವಿಸಿದ್ದು ಕಷ್ಟಗಳ ಸರಮಾಲೆ.

ಕೇವಲ ಪ್ರಾಥಮಿಕ ಎರಡನೆಯ ವರ್ಗದವರೆಗೆ ಮಾತ್ರ ಓದಿದ ಇವರಿಗೆ ಬಡತನದ ಕಟುವಾದ ಅನುಭವದಿಂದಾಗಿ ಶಿಲ್ಪಿಯ ಬದುಕನ್ನು ಸಾರ್ಥಕ ಪಡಿಸಿದವು. ಬಾಲ್ಯದಲ್ಲಿರುವಾಗಲೇ

ಪಿತೃವಿಯೋಗದ ದೌರ್ಭಾಗ್ಯ. ನಂತರದಲ್ಲಿ ಸೋದರಮಾವ ಸಕರಪ್ಪನವರ ಆಶ್ರಯದಲ್ಲಿರುವಾಗ ಕಲೆಯಗೀಳು ಬಾಲಕ ಗುಂಡಪ್ಪನವರಲ್ಲಿ ಅಂಕುರಿಸಿ ಚಿಗುರೊಡೆಯಿತು. ಶಾಲೆಯಲ್ಲಿರುವಾಗ ತಮಗೆ ವಿಧ್ಯಾಭ್ಯಾಸ ಹೇಳುವ ಶಿಕ್ಷಕರ ವ್ಯಂಗ್ಯ ಚಿತ್ರವನ್ನು ಬರೆದು ಸಹಪಾಠಿಗಳಿಗೆ ತೋರಿಸಿ ಖುಷಿಪಡುವ ತುಂಟ ಬುದ್ಧಿ. ಮುಂದೊಂದು ದಿನದಲ್ಲಿ ಇವರೊಬ್ಬ ಅಪೂರ್ವ ಕಲಾವಿದರಾಗುವ ಮುನ್ಸೂಚನೆಯನ್ನೂ ತೋರಿಸಿತೆನ್ನಬಹುದು. ಇವರಲ್ಲಿ ಓದು ಮುಂದುವರೆಯದಿರಲು ಕಡುದಾರಿದ್ರ್ಯದ ತೊಂದರೆ ತಾಪತ್ರಯಗಳೆಂದು ಹೇಳಬಹುದು. ತಾಯಿ ಲಕ್ಷ್ಮಮ್ಮನ ಸಾಂತ್ವನ, ಸೋದರಮಾವ ಸಕರಪ್ಪನವರ ಪ್ರೋತ್ಸಾಹಗಳಿಂದ ಬಾಲ್ಯದಲ್ಲಿರುವಾಗಲೇ ಮರದ ಕೆತ್ತನೆ ಕೆಲಸದಲ್ಲಿ ಓಂ ನಾಮಗೈದು ಅದರಿಂದಲೇ ಸ್ಫೂರ್ತಿ ಪಡೆದದ್ದು.

**ಅಲೆದಾಟ:**

ಹದಿವಯಸ್ಸಿಗೆ ಗುಂಡಪ್ಪ ಕಾಲಿಡುತ್ತಿರುವಂತೆ ಮರದ ಕೆತ್ತನೆಯಲ್ಲಿ ಚಿಕ್ಕ ಪುಟ್ಟ ಆಟಿಕೆ ಗೊಂಬೆಗಳನ್ನು ತಯಾರಿಸುತ್ತ, ಬದುಕಿನ ನಿರ್ವಹಣೆಗೆ ಅವುಗಳನ್ನು ಮಾರಿ ಪುಡಿಕಾಸು ಸಂಪಾದಿಸಲು ಜಾತ್ರೆ, ಸಂತೆಗಳಲ್ಲಿ ಅಲೆದಾಡಿದ ಉದಾಹರಣೆಗಳುಂಟು. ಈ ಅಲೆಮಾರಿ ಬದುಕು ಇಂದು ತಮ್ಮನ್ನು ಒಬ್ಬ ಶಿಲ್ಪಿಯಾಗುವಂತೆ ಪ್ರೇರಿಪಿಸಿತೆಂದು ಶಿಲ್ಪಿಗುಂಡಪ್ಪನವರು ಆಗಾಗ ಸ್ಮರಿಸಿಕೊಳ್ಳುತ್ತಾರೆ. ೧೯೪೫ರಲ್ಲಿ ತಾಯಿ ಲಕ್ಷ್ಮಮ್ಮನವರ ಅಕಾಲಿಕ ಮರಣಾನಂತರ ಇವರಿಗೆ ತಬ್ಬಲಿತನದ ಅನುಭವವಾಗಿ ಸೋದರಮಾವನ ಮನೆಯನ್ನು ತೊರೆದು ಹೋಗುವ ಸ್ಥಿತಿಯುಂಟಾಯಿತು. ಹೀಗೆಯೇ ಬದುಕಿಗೊಂದು ಮಾರ್ಗ ಕಲ್ಪಿಸಿಕೊಳ್ಳಲು ಗುಂಡಪ್ಪನವರ 'ಕಾರವಾನ್' ಯಾತ್ರೆ ಚುಕ್ಕಾಣಿಯಿಲ್ಲದೆ ಸಾಗಿತು. ಸ್ವಾಭಿಮಾನಿಯಾದ ಇವರಲ್ಲಿ ಕಾಡಿದ ಸಮಸ್ಯೆಗಳು, ತೊಂದರೆ-ತಾಪತ್ರಯಗಳು ನೂರಾರು. ಮನೆಯಲ್ಲಿ ಯಾರಿಗೂ ಹೇಳದೇ ೧೯೫೦ರಲ್ಲಿ ಬೆಳಗಾವಿಗೆ ಹೋಗಿ "ಬೆಮ್ಕೊ" ಕಂಪನಿಯಲ್ಲಿ ಪ್ಯಾಟರ್ನ ಮೇಕರ್ ಕೆಲಸವನ್ನು ಪಡೆದುಕೊಂಡು ಸೇವೆ ಸಲ್ಲಿಸುತ್ತಿರುವಾಗ ಇವರ ನಿಷ್ಠೆ ಪ್ರಾಮಾಣಿಕತೆಗೆ 'ಮೇಸ್ತ್ರಿ' ಹುದ್ದೆಯೂ ಲಭಿಸಿತು. ಈ ಸಂದರ್ಭದಲ್ಲಿ 'ಕಲಾಸೇವೆ' ಗುಂಡಪ್ಪನವರನ್ನು ಮತ್ತೆ ಕೈಮಾಡಿ ಕರೆಯಿತು. ಸೋದರ ಮಾವ ಸಕರಪ್ಪನವರು ಇವರಿಗೆ ರಥ ನಿರ್ಮಾಣ ಕೆಲಸಕ್ಕೆ ಆಹ್ವಾನಿಸಿದಾಗ ಇಪ್ಪತ್ತರ ಪ್ರಾಯದ ಈ ಮರಿ ಶಿಲ್ಪಿ ಉತ್ಸಾಹ ಆ ಕೆಲಸಕ್ಕಾಗಿ ಬೆಳಗಾವಿಯಲ್ಲಿಯ ಕೆಲಸಕ್ಕೆ ವಿಧಾಯ ಹೇಳಿ ಮತ್ತೆ ಬಾಗಲಕೋಟೆಗೆ ಹಿಂತಿರುಗಿ ಮಾವನೊಂದಿಗೆ ನೂತನ ರಥ ನಿರ್ಮಾಣ ಕಾರ್ಯಕ್ಕೆ ಹುನಗುಂದಕ್ಕೆ ಪ್ರಯಾಣ ಬೆಳೆಸಿದರು. ಇಲ್ಲಿಂದಲೇ ಹಲವಾರು ಶಿಲ್ಪಗಳ ಅಂದ ಚಂದಗಳನ್ನು ಮನದಲ್ಲೇ ಕಲ್ಪಿಸಿಕೊಂಡು ಆಕರ್ಷಕವಾಗಿ ಕೆತ್ತನೆ ಮಾಡಿ ಖುಷಿ ಪಡುವ ಕಲಾವಂತಿಕೆಯ ಬೀಜ ಗುಂಡಪ್ಪನವರಲ್ಲಿ ಮೊಳಕೆಯೊಡೆಯಿತು.

೧೯೫೨ರಲ್ಲಿ ಡಿಸೆಂಬರ್ ೧೫ರಂದು ಸೋದರ ಮಾವನ ಮಗಳು ಕಾಳಮ್ಮನನ್ನು ಬಾಳ ಸಂಗಾತಿಯನ್ನಾಗಿ ಕೈಹಿಡಿದ ನಂತರ ತಮ್ಮ ಕಲಾಶಕ್ತಿಯನ್ನು ವೃದ್ಧಿಸಿಕೊಂಡ ಶಿಲ್ಪಿ ಗುಂಡಪ್ಪನವರು ಬರ ಬರುತ್ತ ಕಲಾಪ್ರವೀಣತೆಯನ್ನೂ ಪಡೆದುಕೊಂಡರು. ಪ್ರತಿಯೊಂದು ಕೆಲಸದಲ್ಲಿ ತಮ್ಮದೇ ಆದ ವಿಶಿಷ್ಟತನದ ಛಾಪು ಹಾಕುವ ಗುಂಡಪ್ಪನವರು ಮೂರ್ತಿಶಿಲ್ಪದತ್ತ ಒಲಿದದ್ದು, ರಥಶಿಲ್ಪ ನಿರ್ಮಾಣ ಕೆಲಸದಿಂದಲೇ ಎಂಬುದನ್ನು ಯಾವತ್ತೂ ಮರೆಯುವ ಹಾಗಿಲ್ಲ.

**ಖಾದಿಯ ಸೇವಾಕಾರ್ಯ:**

ಹುನಗುಂದದ ಕಾಂಗ್ರೆಸ್ ಸೇವಾಕಾರ್ಯಕರ್ತರಾಗಿದ್ದ ಪ್ರಾಣೇಶಾಚಾರ್ಯರ ಸಂಪರ್ಕದಿಂದಾಗಿ ಗುಂಡಪ್ಪನವರ ಕಲಾ ಕೌಶಲ್ಯಕ್ಕೆ ಪ್ರೋತ್ಸಾಹ, ಇಂಬು ದೊರೆಯಿತು. ವಿಜಾಪುರದ ಖಾದಿ ಗ್ರಾಮೋದ್ಯೋಗದಲ್ಲಿ ಗುಂಡಪ್ಪನವರ ಕಲಾ ವಂತಿಕೆಯನ್ನು ಬಳಸಿಕೊಳ್ಳಲೆಂದು ಅವಕಾಶ ಕಲ್ಪಿಸಿಕೊಟ್ಟ ಪ್ರಾಣೇಶಾಚಾರ್ಯರು ಗುಂಡಪ್ಪನವರನ್ನು ಖಾದಿ ಸೇವಾ ಕಾರ್ಯಕ್ಕೆ ಅಣಿಗೊಳಿಸಿದರು. ೧೯೫೭ರಿಂದ ಸೇವಾಕೇಂದ್ರದ ಕಾರ್ಯಕರ್ತರಾಗಿದ್ದ ಗುಂಡಪ್ಪನವರು ವರ್ಧಾದ ಗಾಂಧೀಜಿ ಆಶ್ರಮ, ಅಹಮ್ಮದಾಬಾದ್, ಸಾಬರಮತಿ ಮುಂತಾದೆಡೆಯಲ್ಲಿ ಅಲೆದಾಡಿ ತಮ್ಮ ಅನುಭವ ವಿಸ್ತಾರ ಮಾಡಿಕೊಂಡರು. ಇವರಲ್ಲಿಯ ನಿಸ್ವಾರ್ಥ, ಕರ್ತವ್ಯ ನಿಷ್ಠೆ ನೋಡಿ ಮೆಚ್ಚಿದ ಖಾದಿ ಸಂಸ್ಥೆಯ ಕೆಲವು ಅಧಿಕಾರಿಗಳು ಪ್ರೋತ್ಸಾಹಿಸಿ ಬೆನ್ನುತಟ್ಟಿದರು. ಇನ್ನು ಕೆಲವರಲ್ಲಿಯ ಕಳ್ಳವ್ಯವಹಾರ ಮಾರ್ಗ, ಆಷಾಢಭೂತಿತನದ ಬಗೆಗೆ ಹೇಸಿಕೆಯುಂಟಾಗಿ ಸ್ವಾಭಿಮಾನಿ ಗುಂಡಪ್ಪ ಆ ಕೆಲಸಕ್ಕೂ ತಿಲಾಂಜಲಿಯನ್ನು ನೀಡಿ ಮತ್ತೆ ಉದ್ಯೋಗಕ್ಕಾಗಿ ಅಲೆದಾಟ ನಡೆಸಿದರು. ಕೊನೆಗೆ ನಿರ್ಗತಿಕ ಗುಂಡಪ್ಪನವರಿಗೆ ಆಶ್ರಯನೀಡಿ ಭಾಗ್ಯದ ಬಾಗಿಲನ್ನು ತೆರೆದು ಸ್ವಾಗತಿಸಿದ್ದು ಬಾಗಲಕೋಟೆಯೆ! ೧೯೬೪ರಲ್ಲಿ ಉಪಜೀವನಕ್ಕಾಗಿ ಒಂದು ಪುಟ್ಟ ಹಿಟ್ಟಿನ ಗಿರಣಿಯ ಮೂಲಕ ಮತ್ತೆ ಬದುಕು ಜಟಕಾಗಾಡಿಯನ್ನು ಮುಂದೋಡಿಸುವಂತಾಯಿತು. ಈ ಸಮಯದಲ್ಲಿ ಗೋಲಪ್ಪನವರು, ಬಿ.ಜಿ. ಹೇಸೆ ಎಂಬವರು ಗುಂಡಪ್ಪನವರಿಗೆ ಟ್ರ್ಯಾಕ್ಟರ್ ಕಂಪನಿಯಲ್ಲಿ ಉದ್ಯೋಗಾವಕಾಶವನ್ನು ನೀಡಿದ ಆಶ್ರಯವನ್ನು ಇಂದಿಗೂ ಕೃತಜ್ಞತೆಯಿಂದ ನೆನೆಯುತ್ತಾರೆ. ಅಂದಿನ ಸಮಯದಲ್ಲಿ ಜೀವನೋಪಾಯಕ್ಕಾಗಿ ಅವರು ಪಟ್ಟಿರುವ ಪಾಡಂತೂ ಹೇಳತೀರದು. ಈ ಸಂದರ್ಭದಲ್ಲಿ ಕಾಲಾವಕಾಶವಿದ್ದಾಗ ಕೆತ್ತಿದ ಕೆಲವು ಶಿಲ್ಪಕೃತಿಗಳನ್ನು ರಚಿಸಿರುವುದನ್ನು ಅರಿತ ಬಾಗಲಕೋಟೆಯ ಪದ್ಮನಾಭ ಹೋಟೆಲ್ ಮಾಲೀಕರಾಗಿದ್ದ ಇವರ ಮಿತ್ರರು ಕಲಾಪ್ರಿಯರಾದುದರಿಂದ ಇವರ ಶಿಲ್ಪಗಳನ್ನು ತಮ್ಮಲ್ಲಿಟ್ಟು ಅವುಗಳ ಮಾರಾಟವ್ಯವಸ್ಥೆಗೂ ಅವಕಾಶ ಕಲ್ಪಿಸಿದರು.

**ಅದೃಷ್ಟದ ಚಮತ್ಕಾರ:**

ಬಾಗಲಕೋಟಗೆ "ಶಾಂತಿ ನಿವಾಸ" ನಾಟಕ ಪ್ರಯೋಗಕ್ಕಾಗಿ ಬಂದಿದ್ದ ಚಲನಚಿತ್ರ ಕಲಾವಿದರ ಸಂಘದೊಂದಿಗೆ ಬಂದಿದ್ದ ಚಿತ್ರತಾರೆ ಪಂಢರಿಬಾಯಿಯವರಿಗೆ ಗುಂಡಪ್ಪ ರಚಿಸಿದ್ದ "ರಾಧಾ ಕೃಷ್ಣ" ಶಿಲ್ಪ ಮನಸೆಳೆಯಿತು. "ಪದ್ಮನಾಭ" ಹೋಟಲ್‌ನ ಶೋಕೆಸ್‌ದಲ್ಲಿಯ ಈ ಶಿಲ್ಪವನ್ನು ಖರೀದಿಸಿ ಕಲಾವಿದನನ್ನು ಕೊಂಡಾಡಿದ್ದು ಗುಂಡಪ್ಪನವರನ್ನು ಇನ್ನಷ್ಟು ಪ್ರೋತ್ಸಾಹ ಪಡಿಸುವಂತಾಯಿತು. ಇದರಲ್ಲಿಯ ಸುಪ್ತಕಲಾ ಪ್ರತಿಭೆಗೆ ಅವಕಾಶ ಕಲ್ಪಿಸಿತು. ಇದೇ ಸಂದರ್ಭದಲ್ಲಿಯೆ ಗುಂಡಪ್ಪನವರ ಶಿಲ್ಪಕಲಾ ಸೃಷ್ಟಿ ಕಾರ್ಯದ ವಿಕಸನಕ್ಕೆ ಒಂದು ಘಟನೆ ನಡೆದುದು ಉಲ್ಲೇಖನೀಯ. ಆಗಾಗ ಕಾಲಾವಕಾಶವಿದ್ದಾಗ ಚಿಕ್ಕ ಪುಟ್ಟ ಕಲಾಕೃತಿಗಳನ್ನು ಸುಂದರವಾಗಿ ಕೆತ್ತಿದ್ದನ್ನು ಬಾಗಲಕೋಟೆಯ ಕೆಲವು ಕಲಾಪ್ರೇಮಿಗಳಲ್ಲಿ ಬಾಗಲಕೋಟೆಯ ಬಸವೇಶ್ವರ ಮಹಾವಿದ್ಯಾಲಯದ ಆವರಣದಲ್ಲಿ ಲಿಂಗೈಕ್ಯ ಬಿಳ್ಳೂರ ಶ್ರೀ ಗುರುಬಸವ ಸ್ವಾಮೀಜಿಯವರ ಮೂರಡಿ ಎತ್ತರದ ವಿಗ್ರಹ ರಚಿಸಲು

ಶಂಕರವೀರಯ್ಯನವರು ಆಗ್ರಹಿಸಿದಂತೆ ಕೇವಲ ಇಪ್ಪತ್ತಾರೆ ದಿನಗಳಲ್ಲಿ ಏಕಾಂಗಿಯಾಗಿ ಗುರುಬಸವಸ್ವಾಮಿಗಳ ಆಕರ್ಷಕ ವಿಗ್ರಹ ರಚಿಸಿದಾಗ ಇವರೊಬ್ಬ ಸಂಪೂರ್ಣ ಶಿಲ್ಪಿಯಾಗಿ ಜನಪ್ರೀಯತೆ ಮನ್ನಣೆ ಪಡೆದುಕೊಂಡರು. ಅಲ್ಲಿಂದಲೇ ಗುಂಡಪ್ಪ ಮಯಾಚಾರ್ಯರ ಬದುಕಿನಲ್ಲಿ ಒಂದು ಬಗೆಯ ಹೊಸ ತಿರುವುಂಟಾಯಿತು. ಬಸವಣ್ಣನವರ ವಚನದಲ್ಲಿಯ "ನೀನೂಲಿದರೆ ಕೊನರು ಕೊನರುವುದಯ್ಯ, ನೀನೂಲಿದರೆ ಬರಡು ಹಯನಹುದಯ್ಯ" ಎಂಬಂತೆ ಈ ಗುರುಬಸವರ ಸ್ವಾಮೀಜಿಯವರ ಶಿಲ್ಪ ನಿರ್ಮಾಣಕಾರ್ಯದಿಂದ ಶಿಲ್ಪಿಯ ಬರಡು ಬದುಕು ಕೊನರಿತಲ್ಲದೇ ಅವರ ಸಮಗ್ರ ಜೀವನವೂ ಸಹಿತ ಆಶ್ಚರ್ಯಕರವಾದ ರೀತಿಯಲ್ಲಿ ವಿಕಸನಗೊಂಡಿತು. ಬದುಕಿನ ಸಾಫಲ್ಯತೆಯನ್ನು ಪಡೆದುಕೊಂಡಿತು.

## ದೈವಭಕ್ತಿ:

ಶಿಲ್ಪ ಶಾಸ್ತ್ರ, ವಿದ್ಯೆ ಕುರಿತು ಯಾರಿಂದಲೂ ಕಲಿಯದ ಗುಂಡಪ್ಪ ಈ ಕ್ಷೇತ್ರದಲ್ಲಿ ಅಪೂರ್ವ ಸಾಧನೆ ಮಾಡಿದ್ದು ಆಶ್ಚರ್ಯಕರ ಸಂಗತಿ. ಕೇವಲ ಪ್ರಾಥಮಿಕ ಶಾಲೆಯ ಎರಡನೇ ವರ್ಗದವರೆಗೆ ಓದಿರುವ ಇವರು ರಾಜ್ಯ ಹಾಗೂ ರಾಷ್ಟ್ರಮಟ್ಟದ ಖ್ಯಾತಿ, ಗೌರವ ಪಡೆದುದು ಸ್ವಂತ ಪರಿಶ್ರಮ ಸತತ ಸಾಧನೆಗಳಿಂದಾಗಿ ಎನ್ನುವುದು ಒಪ್ಪಬೇಕಾದ ಅಂಶ. ತಮ್ಮದೇ ಆದ ರಚನಾ ಕೌಶಲ್ಯ, ತಂತ್ರಗಾರಿಕೆಯ ಪ್ರಯೋಗಗಳು ತಮ್ಮ ಕಲೆಗೆ ಕುಮ್ಮಕ್ಕು ನೀಡಿವೆ ಎಂದು ಹೇಳುತ್ತಾರೆ ಈ ಶಿಲ್ಪಿ. ತಮ್ಮ ಸುತ್ತ ಮುತ್ತಲಿನ ಐಹೊಳೆ, ಬಾದಾಮಿ, ಪಟ್ಟದಕಲ್ಲಿನ ನೂರಾರು ವಾಸ್ತು ಶಿಲ್ಪಗಳಲ್ಲಿಯ ಮೂರ್ತಿಶಿಲ್ಪಗಳ ಪ್ರಭಾವ ಅವುಗಳ ಅಂದಚಂದಗಳು ವಿನ್ಯಾಸಗಳು ತಮ್ಮ ಶಿಲ್ಪ ರಚನೆಗೆ ಸ್ಫೂರ್ತಿ ನೀಡುತ್ತಿವೆಯೆಂದು ಹೆಮ್ಮೆಯಿಂದ ಹೇಳುವ ಗುಂಡಪ್ಪ ಶಿಲ್ಪಿ ತಮ್ಮ ಕಲ್ಪನೆಗೂ ಮೀರಿ ಅಪೂರ್ವ ಶಿಲ್ಪಗಳ ಕೆತ್ತನೆ ಮಾಡಿ ಖುಷಿಗೊಂಡಿದ್ದಾರೆ. ಮಿಂಚಿನ ವೇಗದಲ್ಲಿ ಒರಟುಕಲ್ಲಿನಲ್ಲಿ ಶಿಲ್ಪಿ ಗುಂಡಪ್ಪನವರು ಮೂರ್ತಿ ರಚನಾಕಾರ್ಯ ಮಾಡುವಾಗಿನ ದೃಶ್ಯ ನೋಡುವುದೇ ಒಂದು ಸೊಗಸು. ಶಿಲ್ಪ ನಿರ್ಮಾಣದಲ್ಲಿ ಇವರೂಬ್ಬ 'ಪಾದರಸವ್ಯಕ್ತಿ' ಎನಿಸುತ್ತಾರೆ.

ಎಂಥ ಬಗೆಯ ಶಿಲ್ಪರಚನೆಗಳಿಗೆ ಸ್ಪಂಧಿಸುವ ಕಲಾಸಾಮರ್ಥ್ಯ ಈ ಗುಂಡಪ್ಪ ಶಿಲ್ಪಿಗೆ ಸಾಧಿಸಿದೆ. ಇವರೊಬ್ಬ ಶಿಲ್ಪಿಯಾಗಲು ಹೆಚ್ಚಿನ ಪ್ರೇರಣೆನೀಡಿದ ಮುಖ್ಯರಲ್ಲಿ ಧರ್ಮಗುರುಗಳಾಗಿದ್ದ ಮುರನಾಳಿನ ಪೂಜ್ಯ ಶ್ರೀ ಅಖಂಡೇಶ್ವರ ಸ್ವಾಮೀಜಿ ಹಾಗೂ ಶ್ರೀ ಗಂಗಾಧರ ಸ್ವಾಮೀಜಿ ಮಹಾ ಪುರುಷ ಅವರು. ಇವರಿಬ್ಬರ ಕೃಪಾಶೀರ್ವಾದ ಪ್ರೋತ್ಸಾಹಗಳನ್ನು ಈಗಲೂ ಕೃತಜ್ಞತೆಯಿಂದ ನೆನೆಯುತ್ತಾರೆ. ಅಪ್ಪಟ ದೈವಭಕ್ತರಾದ ಶಿಲ್ಪಿ ಗುಂಡಪ್ಪನವರಲ್ಲಿ ಕುಲದೇವತೆ ಶ್ರೀ ಕಾಳಿಕಾಂಬೆಯಲ್ಲಿ ಅನನ್ಯ ಭಕ್ತಿ ಹಾಗೂ ಶ್ರದ್ಧೆ. ಯಾವುದೇ ಶಿಲ್ಪ ನಿರ್ಮಾಣಕ್ಕೆ ಮೊದಲು ತನ್ನ ಆರಾಧ್ಯದೇವತೆಯ ಸ್ಮರಣೆಯಿಂದ ಕಲಾಸೇವೆ ಆರಂಭಿಸುತ್ತಾರೆ. ಇದೇ ತಮ್ಮ ಶಿಲ್ಪ ನಿರ್ಮಾಣದ ಯಶಸ್ಸಿನ ಮೂಲವೆಂದೂ ಅಭಿಮಾನದಿಂದ ಹೇಳುತ್ತಾರೆ. ೧೯೬೭ರಿಂದ ಇದುವರೆಗೆ ಸುಮಾರು ಎರಡು ಸಾವಿರಕ್ಕೆ ಮೀರಿದ ಸಂಖ್ಯೆಯಲ್ಲಿ ವೈವಿಧ್ಯ ಶಿಲ್ಪ ಕೃತಿಗಳನ್ನು ಕೆತ್ತಿದ ಈ ಶಿಲ್ಪಿಗೆ ದಣಿವೆಂಬುದಿಲ್ಲ. ಇನ್ನೂ ಸಾವಿರಾರು ಶಿಲ್ಪ ರಚಿಸುವ ಅಧಮ್ಯ ಉತ್ಸಾಹ. ತಮ್ಮ ಅವಿರತ ಶ್ರಮದ ಗುಟ್ಟು ತಮ್ಮ

ಬದುಕಿಗೆ ಶ್ರೀರಕ್ಷೆಯಾಗಿರುವ ಅಪೂರ್ವ "ದೈವ ಭಕ್ತಿ" ಎಂದು ವಿನೀತರಾಗಿ ಹೇಳುತ್ತಾರೆ ಗುಂಡಪ್ಪ ಶಿಲ್ಪಿ.

**ಕುಟುಂಬ ವತ್ಸಲ:**

ಇಚ್ಛೆಯಲ್ಲಿ ನಡೆಯುವ ಸತಿ ಶ್ರೀಮತಿ ಕಾಳಮ್ಮ, ಏಕಮಾತ್ರ ಪುತ್ರಿ ಸೌ॥ ಲಕ್ಷ್ಮೀಬಾಯಿ. ಇತರ ಆರು ಪುತ್ರರಾದ ಚಿ॥ ದೇವೇಂದ್ರ ಮಹಾಬಳೇಶ್ವರ, ಚಂದ್ರಶೇಖರ, ವೀರೇಶ, ಪ್ರಭು ಹಾಗೂ ಪುಟ್ಟು ಇವರೆಲ್ಲರೂ ತಂದೆಯವರ ಶಿಲ್ಪ ಕಾರ್ಯದಲ್ಲಿ ಭಾಗಿಗಳಾಗಿ ಕೆಲಸ ಮಾಡುತ್ತ ಪ್ರತಿಯೊಬ್ಬರೂ ಒಂದೊಂದೂ ಕಲಾಪ್ರಕಾರಗಳಲ್ಲಿ ಪರಿಣತಿಯನ್ನು ಹೊಂದಿದ್ದಾರೆ. ಹಿರಿಯ ಪುತ್ರ ಡಿಪ್ಲೋಮಾ ಮೆಕ್ಯಾನಿಕಲ್ ಕೋರ್ಸ ಮುಗಿಸಿ ಈ ಶಿಲ್ಪೋದ್ಯಮದಲ್ಲಿ ಯಂತ್ರಗಳ ಬಳಕೆ ಮಾಡಿ ಕಲಾಕೃತಿಗಳನ್ನು ರಚಿಸುತ್ತಾರೆ, ಇನ್ನೊಬ್ಬ ಪುತ್ರ ಮಹಾಬಳೇಶ್ವರನು ಹೈದ್ರಾಬಾದ್ ಶಿಲ್ಪಕಲಾ ಶಾಲೆಯಲ್ಲಿ ವಾಸ್ತುಕಲೆಯಲ್ಲಿ "ಶಿಲ್ಪ ಸ್ಥಪತಿ" ಪ್ರಶಸ್ತಿ ಪಡೆದು ಬಂದು ಆಧುನಿಕ ಹಾಗೂ ಸಾಂಪ್ರಾದಾಯಕ ವಾಸ್ತು ನಿರ್ಮಾಣ ಕೆಲಸದಲ್ಲಿ, ಶಿಲ್ಪರಚನೆಯಲ್ಲಿ ತೊಡಗಿದ್ದಾನೆ. ದಾವಣಗೆರೆಯ ಕುಶಲ ಕಲಾ ಮಹಾವಿದ್ಯಾಲಯದಲ್ಲಿ ಪದವಿಹೊಂದಿ ಬಂದಿರುವ ವೀರೇಶ್ ಅಪೂರ್ವ ವರ್ಣ ಶಿಲ್ಪಿ ಹಾಗೂ 'ಮಾಡಲಿಸ್ಟ' ಆಗಿದ್ದು, ಸೂಕ್ಷ್ಮಕೆತ್ತನೆಯಲ್ಲಿ ತನ್ನ ಕಲಾ ಸಾಮರ್ಥ್ಯ ಅಭಿವ್ಯಕ್ತ ಪಡಿಸಿ ಅನೇಕ ಬಹುಮಾನ ಪಡೆದ ಯುವಕಲಾವಿದ. ಇತ್ತೀಚೆಗೆ ಪಂಚಲೋಹ ಕುರಿತು ವಿಶೇಷ ತರಬೇತಿ ಹೊಂದಿ ಬಂದು ಇದೀಗ ಇಂಥ ಲೋಹ ಶಿಲ್ಪಗಳ ನಿರ್ಮಾಣಕ್ಕೂ ತೂಡಗಿದ್ದಾರೆ. ಉಳಿದೆಲ್ಲ ಮಕ್ಕಳೊಂದಿಗೆ ಗುಂಡಪ್ಪನವರ ಮೊಮ್ಮಕ್ಕಳೂ ಚಿಕ್ಕಪುಟ್ಟ ಶಿಲ್ಪ ಕೃತಿ ರಚಿಸುವುದನ್ನು ನಾವು ನೋಡುತ್ತಿದ್ದರೆ ಈ ಶಿಲ್ಪಿಯ ಇಡೀ ಕುಟುಂಬವೇ "ಶಿಲ್ಪ ಕಲೆಯ ಆಗರ"ವಾಗಿ ನಮಗೆ ಕಾಣುತ್ತದೆ. ಎಲ್ಲ ಮಕ್ಕಳು ತಮ್ಮ ಶಿಲ್ಪ ನಿರ್ಮಾಣ ಕಾರ್ಯದಲ್ಲಿ ತಂದೆ ಗುಂಡಪ್ಪನವರ ಮಾರ್ಗ ದರ್ಶನದಲ್ಲಿಯೇ ಸಾಗಿ ಅದರಲ್ಲಿ ಯಶಸ್ಸನ್ನೂ ಪಡೆದಿದ್ದಾರೆ.

ಶಿಲ್ಪಿ ಗುಂಡಪ್ಪನವರದು ಹನ್ನೊಂದು ಜನ ಮೊಮ್ಮಕ್ಕಳನ್ನು ಹೊಂದಿದ ಮೂವತ್ತು ಜನರ ಬೃಹತ್ ಕುಟುಂಬ. ಪ್ರತಿಯೊಬ್ಬರಲ್ಲಿನ ಹೊಂದಾಣಿಕೆ, ಸಹಕಾರ ಮನೋಭಾವ, ಕುಟುಂಬ ವಾತ್ಸಲ್ಯಗುಣ ಅಪರೂಪದ್ದು ಎನಿಸುತ್ತದೆ. ಎಲ್ಲಕ್ಕೂ ಮಿಗಿಲಾಗಿ ಮನೆಯ ಎಲ್ಲರ ಜವಾಬ್ದಾರಿ ಹೊತ್ತು ನಡೆಯುವ ಶ್ರೀ ಮತಿ ಕಾಳಮ್ಮನವರ ತಾಳ್ಮೆ ನೆರವು, ಸೊಸೆಯಂದಿರು, ಮೊಮ್ಮಕ್ಕಳನ್ನು ಮಮತೆ ಹಾಗೂ ಅಕ್ಕರೆಯಿಂದ ನೋಡಿಕೊಳ್ಳುವ ಗುಣ 'ಶಿಲ್ಪಿ'ಯ ಕುಟುಂಬಕ್ಕೆ ಹೆಚ್ಚಿನ ಚಾಲನೆಯನ್ನೂ ನೀಡಿದೆ. ಇವರ ಅನೇಕ ಕಲ್ಪನೆಗಳ ಕನಸಾದ 'ಭುವನ ಶಿಲ್ಪಕಲಾ ಶಾಲೆ'ಗೆ ಬರುವ ಯುವಕಲಾವಿದರಿಗೂ ಆಶ್ರಯನೀಡಿ ವಿದ್ಯೆಕಲಿಸುವ ಶಿಲ್ಪಿ ಗುಂಡಪ್ಪನವರಲ್ಲಿ ಸದಾ "ಕುಟುಂಬ ವಾತ್ಸಲ್ಯ ಗುಣ" ಎದ್ದು ಕಾಣುತ್ತಿರುತ್ತದೆ.

**ಶಿಲ್ಪ ಸೃಷ್ಟಿಕಾರ್ಯ:**

ಗುಂಡಪ್ಪಶಿಲ್ಪಿಯವರು ಶಿಲ್ಪ ಶಾಸ್ತ್ರದ ಕುರಿತು ಅಧ್ಯಯನವನ್ನು ಮಾಡದೇ ಹೋಗಿದ್ದರೂ ಅವರ ಪುತ್ರ ಮಹಾಬಳೇಶನು ಹೈದ್ರಾಬಾದ್ ಶಿಲ್ಪ ಕಲಾ ಶಾಲೆಯಲ್ಲಿ ಪರಿಣತಿಹೊಂದಿ ಬಂದ ನಂತರದಲ್ಲಿ ಶಿಲ್ಪ ಶಾಸ್ತ್ರಾಧಾರಿತ ಕಲಾಕೃತಿ ರಚಿಸುವಲ್ಲಿ ಯಶಸ್ವಿಯಾಗಿದ್ದಾರೆ. ಪ್ರತಿಯೊಂದು

ದೇವ ದೇವತೆಗಳ ಮೂರ್ತಿಶಿಲ್ಪಿಗಳಿಗೆ ಸೂಕ್ತವಾದ ಶ್ಲೋಕಾರ್ಥವಿರುವಂತೆ, ಪ್ರತಿಮಾ ಲಕ್ಷಣಗಳಲ್ಲಿಯೂ ಸಹ ವಿಶೇಷತೆಗಳುಂಟು. ಇವುಗಳ ಆಧಾರದಲ್ಲಿ ರಚನೆಗೊಳ್ಳುವ ಶಿಲ್ಪಗಳು ಇವರಿಗೆ ತೃಪ್ತಿಕರವೆನಿಸಿದ ಕಾರಣ ಇತ್ತೀಚೆಗೆ ಇದೇ ಮಾರ್ಗದಲ್ಲಿ ಶಿಲ್ಪಿಯವರು ಸಾಗಿ ಯಶಸ್ವಿಯೂ ಆಗಿದ್ದಾರೆ. ಅಂಗರಚನಾ ಶಾಸ್ತ್ರದ ಬಗೆಗೆ ಬಲ್ಲವರಿಂದ ಮಾಹಿತಿ-ಪಡೆದುಕೊಂಡು ಪ್ರತಿಯೊಂದು ಶಿಲ್ಪದ ಪ್ರಮಾಣ ಬದ್ಧತೆ, ವಿನ್ಯಾಸ ಕುರಿತಂತೆ ಇದರ ಲೆಕ್ಕಾಚಾರ-ಹೊಳವು ಇನ್ನಾರಿಗೂ ತಿಳಿಯದಂತೆ ಮೂರ್ತಗೊಳ್ಳುತ್ತಿರುವುದು ಒಂದು ವಿಶೇಷ.

ಶಿಲ್ಪಿಗುಂಡಪ್ಪನವರಿಂದ ಇಲ್ಲಿಯವರೆಗೆ ಸುಮಾರು ಎರಡು ಸಾವಿರದಷ್ಟು ವೈವಿಧ್ಯಮಯ ಶಿಲ್ಪರಚನೆಗೊಂಡು ಇವರಿಗೆ ಹೆಗ್ಗಳಿಕೆ ನೀಡಿದೆ. ಕಾಳಿಕೆ, ಶಾರದಾ, ಮಹಾಲಕ್ಷ್ಮಿ, ಅನ್ನಪೂರ್ಣೆ, ಗಣಪತಿ, ಈಶ್ವರ, ವೀರಭದ್ರ, ಆದಿಶೇಷ, ಆಂಜನೇಯ, ನಂದಿ ಮುಂತಾದ ನೂರಾರು ದೇವ ದೇವತೆಗಳ ವಿಗ್ರಹದೊಂದಿಗೆ ಶರಣ ಸಂತರಶಿಲ್ಪಗಳನ್ನು, ಸಮಾಜ ಸೇವಕರು, ಗಣ್ಯರ ವಿಗ್ರಹಗಳನ್ನು ಸುಂದರವಾಗಿ ಕೆತ್ತಿ ತಮ್ಮಲ್ಲಿಯ ಕಲಾ ಪರಿಣತಿಯನ್ನು ಅಭಿವ್ಯಕ್ತಿಸಿ ಜನಮನ್ನಣೆಯನ್ನು ಪಡೆದಿದ್ದಾರೆ. ಇದರೊಂದಿಗೆ ಬಾಗಿಲು ಚೌಕಟ್ಟು ವೃಂದಾವನ ಮುಂತಾದವುಗಳಲ್ಲಿಯೂ ಶಿಲ್ಪಿ ಗುಂಡಪ್ಪನವರ ಕಲಾವೃಂದಾವನ ಮುಂತಾದವುಗಳಲ್ಲಿಯೂ ಶಿಲ್ಪಿ ಗುಂಡಪ್ಪನವರ ಕಲಾ ಕೌಶಲ್ಯ ಮೆರೆದಿದೆ. ಮೃದುವಾದ ಕಪ್ಪುಶಿಲೆಯಲ್ಲಿ, ಸಂಗಮವರಿ ಶಿಲೆಯಲ್ಲಿ ನೈಜಕಲೆಗಾರಿಕೆಯಿಂದ ಆಕರ್ಷಕ ಶಿಲ್ಪರಚಿಸುವ ಗುಂಡಪ್ಪ ಶಿಲ್ಪಿಯವರ ಕಲಾವೈಭವಕ್ಕೆ ಮಾರುಹೋಗದವರಿಲ್ಲ.

**ಕಲಾ ವಿಶೇಷತೆ:**

ಗುಂಡಪ್ಪನವರಿಂದ ನಿರ್ಮಾಣಗೊಂಡ ಕಲಾಕೃತಿಗಳಲ್ಲಿಯ ವಿಶೇಷ ಅಂಶಗಳೆಂದರೆ ಸಾಂಪ್ರದಾಯಿಕ ಗುಣಗಳು, ಸಹಜವಿನ್ಯಾಸ, ಆಕರ್ಷಕತೆ. ಇವುಗಳಿಂದ ಶಿಲ್ಪಗಳು ನೋಡುವವರನ್ನು ಸುಲಭವಾಗಿ ಮನಸೆಳೆಯುತ್ತವೆ. ಹೇಳಿದ ಸಮಯಕ್ಕೆ ಶಿಲ್ಪಕೃತಿಗಳನ್ನು ಸಿದ್ಧಪಡಿಸಿ ಕೊಡುವ ಜಾಯಮಾನದ ಶಿಲ್ಪಿ ಗುಂಡಪ್ಪ. ಕೊಟ್ಟಮಾತಿನಂತೆ ನಡೆಯುವ ಶಿಸ್ತಿನ ಸಿಪಾಯಿಕೊಡಾ ಆಗಿದ್ದಾರೆಂಬುದು ಇವರನ್ನು ಹತ್ತಿರದಿಂದ ನೋಡಿದವರಿಗೆ ಗೊತ್ತು.

**ಆಶೆ ಆಕಾಂಕ್ಷೆಗಳು:**

'ಕಲೆಗಾರ ಜೀವನದ ಸವಿಗಾರ' ಎಂದು ಕಲಾವಿದರ ಕುರಿತು ಹೇಳಿದ ಜಾನ್ನುಡಿಯಂತೆ ತಮ್ಮ ಗತಕಾಲದ ಹಲವು ತೊಂದರೆಯ ದಿನಗಳನ್ನು ಅವಿರತ ಶ್ರಮದಿಂದ ಎದುರಿಸಿ ಆತ್ಮಸ್ಥೈರ್ಯ ಬೆಳಸಿಕೊಂಡ ಶಿಲ್ಪಿ ಗುಂಡಪ್ಪ ಬಹುದೊಡ್ಡ ಕನಸುಗಾರ ಕೂಡಾ ಆಗಿದ್ದಾರೆ. ಮುಂದಿನ ತಲೆಮಾರಿನವರಲ್ಲಿ ಕಲಾರಾಧನೆಯ ಹವ್ಯಾಸ ಮೂಡಲೆಂದು ತಮ್ಮದೇ ಕಾರ್ಯಕ್ಷೇತ್ರದಲ್ಲಿ 'ಭುವನ ಶಿಲ್ಪ ಕಲಾಶಾಲೆ'ಯನ್ನು ಕಳೆದ ೧೯೮೨ರಲ್ಲಿ ಸ್ಥಾಪಿಸಿಕೊಂಡು ಅದರಲ್ಲಿ ಈಗಾಗಲೇ ಹಲವಾರು ಜನ ಯುವಕಲಾವಿದರನ್ನು ತರಬೇತಿ ಪಡಿಸಿದ್ದಾರೆ. ಕರಕುಶಲ ಮಂಡಳಿ ಸಹಯೋಗದಲ್ಲಿ ಇಂಥ ಕಲಾವಿದರನ್ನು ಗುರುತಿಸಿ ಅವರಿಗೆ ಸ್ವಯಂ ಉದ್ಯೋಗ ಅವಕಾಶಗಳು ದೊರೆಯುವುದರಲ್ಲೂ ಪ್ರೋತ್ಸಾಹಿಸಿದ್ದಾರೆ. ಎಲ್ಲ ಕಲಾ ವೃತ್ತಿಯಲ್ಲಿ ಕಠಿಣವಾದ ಶಿಲ್ಪ ನಿರ್ಮಾಣ ಕಾರ್ಯದಲ್ಲಿ ನಮ್ಮ

ಯುವಕರು ತಾಳ್ಮೆ, ಶ್ರದ್ಧೆ, ನಿಷ್ಠೆಗಳಲ್ಲಿ ತೊಡಗದಿರುವಂಥ ಮನೋವೃತ್ತಿಯ ಬಗೆಗೆ ಖೇದಪಡುವ ಅವರಿಗೆ ಹಲವಾರು ಬಗೆಯ ಶಿಲ್ಪ ಪ್ರಯೋಗಗೈಯುವ ಬಗೆಗೂ ಹಿರಿಯಾಸೆಯುಂಟು. ವ್ಯಾಪಾರೀ ಕೇಂದ್ರವಾದ ಬಾಗಲಕೋಟೆಯಲ್ಲಿ ವೈವಿಧ್ಯಶಿಲ್ಪಗಳ "ಪ್ರದರ್ಶನಾಮಳಿಗೆ"ಯನ್ನು ನಿರ್ಮಾಣ ಮಾಡುವಲ್ಲಿಯೂ ಈ ಶಿಲ್ಪಿ ಬಹುಕಾಲದಿಂದ ಯೋಚಿಸುತ್ತಿದ್ದಾರೆ.

**ಹವ್ಯಾಸ:**

ಓದು ಬರಹ ಅಲ್ಪಮಟ್ಟದ್ದಾಗಿದ್ದರೂ ಸಂಗೀತ ಹಾಗೂ ಸಾಹಿತ್ಯದಲ್ಲಿ ಅಪಾರ ಒಲವು ಅಭಿಮಾನವಿರುವ ಗುಂಡಪ್ಪಶಿಲ್ಪಿ ಸ್ವಭಾವತಃ ಭಾವಜೀವಿ. ಅನ್ಯರ ಕಷ್ಟ ತಾಪತ್ರಯಗಳಲ್ಲಿ ಸ್ಪಂಧಿಸಿ ಸಹಕಾರ, ನೆರವು ನೀಡುವ ಔದಾರ್ಯತನ ಶಿಲ್ಪಿಯ ಹಿರಿಮೆ ಎನ್ನಬೇಕು. ತಾನು ಬೆಳೆದ ಸಮಾಜದ ಅಭಿವೃದ್ಧಿಕಾರ್ಯಗಳಿಗೆ ಸದಾ ಸ್ಪಂಧಿಸುವ ಈ ವ್ಯಕ್ತಿ ಶೈಕ್ಷಣಿಕ ಕ್ಷೇತ್ರದ ಬೆಳವಣಿಗೆಯಲ್ಲೂ ಲಕ್ಷಾಂತರ ರೂಪಾಯಿ ಆರ್ಥಿಕ ನೆರವು ನೀಡಿ ಮಕ್ಕಳ ಭವಿಷ್ಯಕ್ಕೂ ನೆರವಾದ ಉದಾರದಾನಿ. ಇವರ ಹಲವಾರು ಕನಸುಗಳ ಕಲ್ಪನೆಯ ಪೂಜ್ಯ ಶ್ರೀ ವೆಂಕಟೇಶ ಸ್ವಾಮೀಜಿಗಳವರ ವಿದ್ಯಾಸಂಸ್ಥೆಯ ಪ್ರಗತಿಗಾಗಿ ಮಾಡಿದ ಪ್ರಯತ್ನ ಉಲ್ಲೇಖನೀಯ. ಇದರಂತೆ ಹಲವಾರು ಸಾಹಿತ್ಯಕೃತಿಗಳ ಪ್ರಕಟನೆಗಾಗಿ ತನ್ನ ಅಭಿಮಾನೀ ಲೇಖಕರನ್ನು ಪ್ರೋತ್ಸಾಹಿಸಿ ಆರ್ಥಿಕ ನೆರವು ನೀಡುವ ಶಿಲ್ಪಿಗುಂಡಪ್ಪನವರ ಧಾರಾಳತನ ಶ್ಲಾಘಿಸುವಂಥದ್ದು.

ದೀನ ದಲಿತರಿಗೆ, ವಿದ್ಯಾರ್ಥಿಗಳಿಗೆ, ಸಮಾಜದ ಅಭಿವೃದ್ಧಿಕಾರ್ಯಗಳ ಪ್ರಗತಿಗೆ ದಾನಧರ್ಮದ ಕಾರ್ಯ ಮುಂದುವರೆಸಿದ ಇವರು ಛಲಗಾರ ವ್ಯಕ್ತಿಯೂ ಆಗಿದ್ದಾರೆಂಬುದನ್ನು ಮರೆಯುವಂತಿಲ್ಲ. "ಚೈತನ್ಯ ಶೀಲ ಸ್ವಭಾವಕ್ಕೆ ಮುಪ್ಪಿಲ್ಲ" ಎಂದು ಹೆಮ್ಮೆಯಿಂದ ಹೇಳುವ ಗುಂಡಪ್ಪ ಶಿಲ್ಪಿಯವರಿಗೆ ತಮ್ಮ ಇಂದಿನ ಇಳಿ ವಯಸ್ಸಿನಲ್ಲಿ ರಸಿಕ ಮನದ ಕಲಾಸಕ್ತರಿಗೆ ಏನನ್ನಾದರೂ ಹೊಸತು ಮಾಡಿ ತೋರಿಸುವ ಬಲವಾದ ಆಶೆ, ಆಕಾಂಕ್ಷೆಗಳುಂಟು. ಈಗ ನಾಲ್ಕಾರು ವರ್ಷಗಳ ಹಿಂದೆ ಪಂಚಲೋಹ ಶಿಲ್ಪ ಕಾರ್ಯಾಗಾರವನ್ನು ಆರಂಭಿಸಿ ಅದರಿಂದ ಹಲವಾರು ಚಿಕ್ಕದೊಡ್ಡ ವಿಗ್ರಹಗಳನ್ನು ರಚಿಸಿ ಲೋಹ ಶಿಲ್ಪಕ್ಷೇತ್ರಕ್ಕೂ ತಮ್ಮ ಕೊಡುಗೆ ವಿಸ್ತರಿಸಿದ್ದಾರೆ. ಈ ಪ್ರಕಾರದ ಶಿಲ್ಪ ನಿರ್ಮಾಣ ಕುರಿತು ವಿಶೇಷ ತರಬೇತಿಯನ್ನು ಪುತ್ರ ವೀರೇಶನಿಗೆ ಬೆಂಗಳೂರಿನ ಕಲಾಕೇಂದ್ರದಲ್ಲಿ ಪರಿಣಿತಿಯನ್ನು ಕೊಡಿಸಿ ಬಂದ ನಂತರ, ಇಂಥ ಶಿಲ್ಪಗಳ ಉತ್ಪಾದನೆಗೂ ಈಗ ತೊಡಗಿದ್ದಾರೆ.

ಕಲಾವಿದರ ಆಯ್ಕೆಸಮಿತಿ ಸದಸ್ಯರಾಗಿ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಸದಸ್ಯರಾಗಿ, ಕಲಾವಿದರಿಗೆ ಪ್ರೋತ್ಸಾಹಿಸಲು ಅಕಾಡೆಮಿಯ ಹಲವಾರು ಕಾರ್ಯಕ್ರಮಗಳಿಗೆ ಸ್ಪಂಧಿಸುತ್ತಿರುವ ಶಿಲ್ಪಿ ಗುಂಡಪ್ಪನವರು ಹಲವು ಜನ ಉತ್ತರ ಕರ್ನಾಟಕದ ಲೇಖಕರನ್ನೂ, ಕಲಾವಿದರನ್ನೂ ಪ್ರೋತ್ಸಾಹಿಸಿ ಮುನ್ನಡೆಯಲು ಚಾಲನೆ ನೀಡಿದ್ದಾರೆ, ಗೌರವಿಸಿ ಅಭಿನಂದಿಸಿದ್ದಾರೆ.

ಪ್ರತಿವರ್ಷ ಡಿಸೆಂಬರ್ ೧೬ರಂದು ಬಾಗಲಕೋಟೆಯಲ್ಲಿ 'ಶಿಲ್ಪಿ'ಯ ಹುಟ್ಟು ಹಬ್ಬವನ್ನಾಚರಿಸುವ ಸಂದರ್ಭದಲ್ಲಿ ಮಕ್ಕಳು ಹಾಗೂ ಅಭಿಮಾನೀ ಬಳಗ ಏರ್ಪಡಿಸುವ ಸಮಾರಂಭದಲ್ಲಿ ನಾಡಿನ ಹಲವಾರು ಕಲಾವಿದರನ್ನು, ಸಾಹಿತಿಗಳನ್ನು, ಕವಿಗಳನ್ನು ಗೌರವಿಸುವ

ಪರಂಪರೆಯನ್ನು ಬೆಳೆಸಿಕೊಂಡು ತಮ್ಮೊಂದಿಗೆ ಇನ್ನಿತರರ ಪ್ರತಿಭೆ ಗೌರವಗಳನ್ನು ಕೊಂಡಾಡಿದ್ದಾರೆ. ಇಂಥ ಗೌರವ ಪಡೆದವರಲ್ಲಿ ಬಾಗಲಕೋಟೆಯ ಜೀವಣ್ಣಮಸಳಿ, ಕೆ.ಜಿ.ಎಫ್.ನ ಖ್ಯಾತ ಲೇಖಕ ದಂಪತಿಗಳಾದ ಶ್ರೀಜಿ. ಜ್ಞಾನಾನಂದ-ಶ್ರೀಮತಿ ಸರಿತಾ ಜ್ಞಾನಾನಂದ, ಕಲಾವಿದ ಶ್ರೀ ಎನ್. ಮರಿಶಾಮಾಚಾರ್, ಉತ್ತರ ಕರ್ನಾಟಕ ಹಲವಾರು ಜನ ಪ್ರಚಾರವಿಲ್ಲದ ಕಲಾವಿದರು ಮಹಾಶಿಲ್ಪಿಯ ಅಂತಃಕರಣದ ಆಶೀರ್ವಾದ ಪಡೆದು ಸಂತೃಪ್ತಪಟ್ಟಿದ್ದಾರೆ. ಒಬ್ಬ ಸಾಮಾನ್ಯ ಸ್ತರದ ವ್ಯಕ್ತಿ ಹಂತ ಹಂತವಾಗಿ ತನ್ನದೇ ಸಾಧನೆ, ಪ್ರಯತ್ನ ಮಾತ್ರದಿಂದ ಹಂತ-ಹಂತವಾಗಿ ವ್ಯಕ್ತಿತ್ವ ವಿಕಸನ ಮಾಡಿಕೊಂಡು ತಾನು, ತನ್ನ ಸಮಗ್ರ ಕುಟುಂಬ ಬೆಳೆಸುವುದರೊಂದಿಗೆ ಇಡೀ ಸಮಾಜಕ್ಕೊ ಸಹ ಹೇಗೆ ಕೊಡುಗೆ ನೀಡಬಲ್ಲನೆಂಬುದಕ್ಕೆ ಶಿಲ್ಪಿ ಗುಂಡಪ್ಪನವರು ಸಾರ್ಥಕ ಉದಾಹರಣೆಯಾಗಿದ್ದಾರೆ.

**ಲಭಿಸಿದ ಪ್ರಶಸ್ತಿಗಳು ಹಾಗೂ ಗೌರವಗಳು:**

ಉತ್ತರ ಕರ್ನಾಟಕ ನಿರ್ಲಕ್ಷಿತ ಪ್ರದೇಶದಲ್ಲಿ ವಾಸಗೊಂಡಿರುವ ಶಿಲ್ಪಿ ಗುಂಡಪ್ಪನವರತ್ತ ಪ್ರಾರಂಭಕಾಲದಲ್ಲಿ ಇವರ ಶಿಲ್ಪ ನಿರ್ಮಾಣ ಕಾರ್ಯಕ್ಕೆ ಯಾವುದೇ ಪ್ರೋತ್ಸಾಹ, ಪುರಸ್ಕಾರಗಳು ದೊರತ ಉದಾಹರಣೆಗಳಿಲ್ಲ. ಶಿಲ್ಪಿ ಗುಂಡಪ್ಪನವರಿಗೆ ಲಭಿಸಿದ ಪ್ರಶಸ್ತಿಗಳಲ್ಲಿ ೧೯೭೮ರಲ್ಲಿ ರಾಜ್ಯ ಕರಕುಶಲ ಮಂಡಳಿ ಏರ್ಪಡಿಸಿದ್ದ ಶಿಲ್ಪಕಲಾ ಪ್ರವೀಣರ ಸೃಜನ ಸ್ಪರ್ಧೆಯಲ್ಲಿ ಕೊಡಮಾಡಿದ ಪ್ರಥಮ ಪುರಸ್ಕಾರ. ಅಂದಿನ ಮುಖ್ಯ ಮಂತ್ರಿ ದಿ. ದೇವರಾಜ ಅರಸು ಅವರಿಂದ ಲಭಿಸಿತು. ನಂತರದಲ್ಲಿ ೧೯೮೮ರಲ್ಲಿ ರಾಜ್ಯ ಲಲಿತಕಲಾ ಅಕಾಡೆಮಿ ಕಲಾಕ್ಷೇತ್ರಕ್ಕೆ ಸಲ್ಲಿಸಿರುವ ಸೇವೆಯನ್ನು ಪುರಸ್ಕರಿಸಿ ಗೌರವಿಸಿತು. ೧೯೯೧ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ನೀಡಿದ ರಾಜ್ಯ ಸರ್ಕಾರ ಧಾರವಾಡದಲ್ಲಿ ಅದ್ದೂರಿ ಸಮಾರಂಭದಲ್ಲಿ ಸನ್ಮಾನಿಸಿತು. ಕಳೆದ ವರ್ಷ ೧೯೯೮ರಲ್ಲಿ ಈ ಮಹಾ ಶಿಲ್ಪಿ ಶಿಲ್ಪಕಲಾ ಕ್ಷೇತ್ರಕ್ಕೆ ನೀಡಿದ ಅಪೂರ್ವ ಕೊಡುಗೆಗಾಗಿ ರಾಜ್ಯದ ಉನ್ನತಮಟ್ಟದ "ಜಕಣಾಚಾರಿ ಪ್ರಶಸ್ತಿ"ಯನ್ನು ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ನೀಡಿ ಶಿಲ್ಪಿ ಜಿ. ಡಿ. ಮಯಾಚಾರ್ಯರನ್ನು ರಾಜ್ಯ ಸರ್ಕಾರದ ಪರವಾಗಿ ಸನ್ಮಾನಿಸಿ ಗೌರವಿಸಲಾಯಿತು. ಇದರಂತೆಯೇ ಹತ್ತು ಹಲವು ಸಮಾಜದ ಗೌರವ ಸನ್ಮಾನಗಳ ಸರಮಾಲೆಯೇ ಈ ಅಧಮ್ಯ ಚೇತನಕ್ಕೆ ಲಭಿಸಿದೆ. ಈ ನೂರಾರು ಗೌರವ ಸನ್ಮಾನಗಳಿಗೆ ಹಿಗ್ಗದೇ ತಮ್ಮದೇ ಆದ ಧೀಮಂತ ಸದಾ ಸರಳತನದಿಂದ ಸಾಗುವ ನಿಸ್ಪೃಹ ಬದುಕೇ ಒಂದು ಗಂಧದ ಕೊರಡಿನಂತೆ. ಅದನ್ನು ಉಜ್ಜಿದಷ್ಟೂ ಗಂಧದ ಸಮನೋಹರ ಕಂಪು-ಇಂಪು ನಾಡೆಲ್ಲವೂ ಹಬ್ಬುತ್ತದೆ.



# ವೀರಾಚಾರ್ಯ ಅರ್ಕಾಚಾರ

ಮೌನೇಶ್ವರ ಬಡಿಗೇರ

ಶಿಲ್ಪ ಶಬ್ದವು 'ಶೀಲ ಸಮಾದೌ' ಎಂಬ ಸಂಸ್ಕೃತ ಧಾತುವಿನಿಂದ ನಿಷ್ಪನ್ನವಾಗಿರುತ್ತದೆ. 'ಶೀಲ' ಧಾತುವು ತಪಸ್ಸನ್ನು ಸೂಚಿಸುತ್ತದೆ. ಶಿಲ್ಪಿಯು ಧ್ಯಾನಮಗ್ನನಾಗಿ ಯಾವ ಶಿಲ್ಪವನ್ನು ರಚಿಸುತ್ತಾನೋ ಅದು ನೋಡುಗರಿಗೆ, ಸೌಂದರ್ಯೋಪಾಸಕರಿಗೆ ತನ್ಮಯಾನಂದವನ್ನು ಉಂಟುಮಾಡುತ್ತದೆ. ವೇದ ಪೂರ್ವ ಕಾಲದಿಂದಲೇ ಶಿಲ್ಪವು ಉಗಮವಾಗಿದ್ದು ವೇದ ಕಾಲದಲ್ಲಿ ಪ್ರೌಢವಾಗಿ ವಿಕಸನಗೊಂಡು ಪರಿಪಕ್ವವಾದ ಈ ಶಿಲ್ಪಜ್ಞಾನವು ಮುಂದಿನ ಪೀಳಿಗೆಗೆ ಮಾರ್ಗದರ್ಶನಕ್ಕಾಗಿ ಶಾಸ್ತ್ರರೂಪವನ್ನು ಧರಿಸಿತೆಂದು ಶಿಲ್ಪ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಶಿಲ್ಪ ಪರಂಪರೆಯನ್ನು ಅವಲೋಕನ ಮಾಡಿದಾಗ ಶಿಲ್ಪಿಗಳು ಸರ್ವಧರ್ಮ ಸಮನ್ವಯಾಚಾರ್ಯರಾಗಿ, ಪ್ರಾಚೀನ ಕಾಲದಿಂದಲೂ ಹಿಂದೂ, ಬೌದ್ಧ, ಜೈನ, ಕ್ರೈಸ್ತ ಮುಂತಾದ ಧರ್ಮಗಳಿಗೆ ಸಂಬಂಧಿಸಿದ ದೇವಾಲಯಗಳನ್ನು ವಿಹಾರಗಳನ್ನು ಚೈತ್ಯಗಳನ್ನು, ಬಸದಿಗಳನ್ನು ಗುಹಾಲಯಗಳನ್ನು ತಮ್ಮ ಹೃದಯದಲ್ಲಡಗಿದ ಸೌಂದರ್ಯಪ್ರಜ್ಞೆಗೆ ಸಂಸ್ಕಾರ ಕೊಟ್ಟು ನಿರ್ಮಿಸಿದ್ದಾರೆ. ಇವೆಲ್ಲವೂ ಭಾರತೀಯ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಪ್ರತಿಫಲಕಗಳಾಗಿವೆ. ಶಿಲ್ಪಿಗಳ ಅಂತರಂಗದಿಂದ ಉದಿಸಿಬಂದ ಸೌಂದರ್ಯದ ಖಣಿಗಳಾಗಿವೆ. ಶಿಲ್ಪಿಗಳು ಯಾವ ಫಲಾಪೇಕ್ಷೆ ಇಲ್ಲದೇ ಬಿರುದು ಬಾವಲಿಗಳ ಆಸೆ ಇಲ್ಲದೇ ತಮ್ಮನ್ನು ಕರ್ಮಯೋಗದಲ್ಲಿ ತೊಡಗಿಸಿಕೊಂಡು "ಕಾಯಕವೇ ಕೈಲಾಸ"ವೆಂಬ ತತ್ತ್ವವನ್ನು ಮೊತ್ತಮೊದಲು ಜಗತ್ತಿಗೆ ತೋರಿಸಿಕೊಟ್ಟವರು. ನಮ್ಮ ಭಾರತದ ಭೂಮಿಯನ್ನು ಸಾವಿರಾರು ದೇವಾಲಯಗಳು, ಗುಹಾಲಯಗಳು, ಚೈತ್ಯಗಳು, ವಿಹಾರಗಳು, ಬಸದಿಗಳು ಸ್ತೂಪಗಳನ್ನು ಸೃಷ್ಟಿಸಿ ಅಸಂಖ್ಯಾತ ಮೂರ್ತಿ ಶಿಲ್ಪಗಳನ್ನು ಸೃಜಿಸಿ ಭಕ್ತಿಯ ಅಡಿಪಾಯ ಹಾಕಿ ದೇವ ಭೂಮಿಯನ್ನಾಗಿ ಮಾಡಿದ ಕೀರ್ತಿ ಶಿಲ್ಪಿಗಳಿಗೆ ಸಲ್ಲತಕ್ಕದ್ದು. ನಮ್ಮ ದೇಶದ ಉದ್ದಗಲಗಳಲ್ಲಿ ಹರಡಿರುವ ವಾಸ್ತುಶಿಲ್ಪ ತಾಣಗಳನ್ನು ಅಲ್ಲಿಯ ಮೂರ್ತಿ ಶಿಲ್ಪಗಳನ್ನು ಅವಲೋಕಿಸಿದಾಗ ಶಿಲ್ಪಿಗಳು ಮಾನವತೆಯ ಮಾನವೀಯತೆಯನ್ನು ದೈವತ್ವಕ್ಕೇರಿಸಿ ಪವಿತ್ರವಾದ ಪುಣ್ಯಕ್ಷೇತ್ರಗಳನ್ನಾಗಿ ಮಾಡಿದ್ದು ಕಂಡುಬರುತ್ತದೆ.

"ತಪಸ್ಸಿನಿಂದ ಸಾಕ್ಷಾತ್ಕರಿಸಿಕೊಂಡ ಸತ್ಯವೇ ಶಿಲ್ಪ" ತಪಸ್ಸು ಎಂದರೆ ಸನ್ಯಾಸಿಯಾಗುವುದಲ್ಲ. ಜುಟ್ಟು ಬಿಡುವುದಲ್ಲ, ಕಾವಿ ಬಟ್ಟೆಯನ್ನು ಧರಿಸಿ ಕಟ್ಟಿಗೆಯ ಪಾದರಕ್ಷೆಗಳನ್ನು ಧರಿಸಿ ಓಡಾಡುವುದಲ್ಲ. ಕಾಡಿಗೆ ಹೋಗಿ ಬೆಟ್ಟದ ಮೇಲೆ ಕುಳಿತು ಜಪ ಮಾಡುವುದಲ್ಲ. ಅನ್ನ, ನೀರು ಬಿಟ್ಟು ಉಪವಾಸ ಕೂಡುವುದೂ ಅಲ್ಲ. ಆದರೆ ಯಾರಿಗೆ ಯಾವ ವಿಷಯದಲ್ಲಿ ಆಸಕ್ತಿ ಇರುತ್ತದೆಯೋ ಅದು

ಜ್ಞಾನವಿರಲಿ, ವಿಜ್ಞಾನವಿರಲಿ, ಗಣಿತವಿರಲಿ, ಸಾಹಿತ್ಯವಿರಲಿ, ಸಂಗೀತವಿರಲಿ, ಚಿತ್ರವಿರಲಿ, ಶಿಲ್ಪವಿರಲಿ, ವೈದ್ಯಕೀಯವಿರಲಿ ಆಯಾ ವಿಷಯದ ಕ್ಷೇತ್ರದಲ್ಲಿ ನಿರಂತರ ಚಿಂತನೆ ಮಾಡಿ, ಸಾಧನೆಗೈದು ತಮ್ಮ ತಮ್ಮ ಪ್ರತಿಭಾಶಕ್ತಿಯನ್ನು ತಮಗೆ ಇಷ್ಟವಿರುವ ಮಾಧ್ಯಮಗಳ ಮೂಲಕ ಅಭಿವ್ಯಕ್ತಗೊಳಿಸುವುದಾಗಿದೆ.

ಯಾರು ಕಲಾ ಪ್ರತಿಭೆಯನ್ನು ವಿವಿಧ ಮಾಧ್ಯಮಗಳ ಮೂಲಕ ಅಭಿವ್ಯಕ್ತಗೊಳಿಸಿ ಜನತೆಯ ಹೃದಯದಲ್ಲಿ ಆಳವಾಗಿ ನಿಂತು ಕಲಾದರ್ಶನ ಮಾಡಿ ಆತ್ಮಾನಂದವನ್ನು ಕೊಡಬಲ್ಲರೋ ಅಂತಹವರನ್ನು ಕಲಾ ತಪಸ್ವಿಗಳೆಂದು ಕರೆಯುವರು. ಶಿಲೆಯನ್ನು, ಕಾಷ್ಠವನ್ನು, ಲೋಹವನ್ನು ಮಾಧ್ಯಮವನ್ನಾಗಿ ಮಾಡಿಕೊಂಡು ಮೂರ್ತಿ, ವಾಸ್ತುಶಿಲ್ಪ, ಸೃಷ್ಟಿಗಾಗಿ ತಮ್ಮ ಜೀವನವನ್ನೇ ಮೀಸಲಿಟ್ಟ ಅನೇಕ ಶಿಲ್ಪಕಲಾ ತಪಸ್ವಿಗಳಿದ್ದಾರೆ. ಅಂತಹವರಲ್ಲಿ ರಾಣೇಬೆನ್ನೂರಿನ ಶ್ರೀ ವೀರಾಚಾರ್ಯ ಅರ್ಕಾಚಾರ ಇವರೂ ಒಬ್ಬರು.

ವೀರಾಚಾರ್ಯರು ರಾಣೇಬೆನ್ನೂರು ತಾಲ್ಲೂಕಿನ ಎರೆಕುಪ್ಪೆ ಗ್ರಾಮದಲ್ಲಿ ವಿಶ್ವಬ್ರಾಹ್ಮಣ ವಂಶದ ಕಾಳಾಚಾರ್ಯ ಹಾಗೂ ಸಂಕಮ್ಮ ದಂಪತಿಗಳ ಸುಪುತ್ರರಾಗಿ ೧೯೨೭ರಲ್ಲಿ ಜನಿಸಿದರು. ತಂದೆ ಕಾಳಾಚಾರ್ಯರು ಲೋಹಶಿಲ್ಪ, ಕಾಷ್ಠಶಿಲ್ಪ, ಯಕ್ಷಗಾನ ಸೂತ್ರದ ಗೊಂಬೆಯಾಟದಲ್ಲಿ ಪ್ರವೀಣರಾಗಿದ್ದರು. ಬಾಲ್ಯದಲ್ಲಿ ಮಗನನ್ನು ಪ್ರಾಥಮಿಕ ಶಿಕ್ಷಣಕ್ಕಾಗಿ ಶಾಲೆಗೆ ಸೇರಿಸಿದರು. ವೀರಾಚಾರ್ಯರು ನಾಲ್ಕನೆಯ ತರಗತಿಯಲ್ಲಿರುವಾಗಲೇ ಚಿತ್ರ ಬಿಡಿಸುವ ಗೀಳು ಅಂಟಿಕೊಂಡಿತು. ತನ್ನ ವಯಸ್ಸಿಗೆ ಮೀರಿದ ಚಿತ್ರ ಬಿಡಿಸುತ್ತಿದ್ದರು. ಅಲ್ಲದೇ ಅವರ ಗುರುಗಳ ಭಾವಚಿತ್ರವನ್ನು ಚಿತ್ರಿಸಿ ತೋರಿಸುತ್ತಿದ್ದರು. ಅವರ ಗುರುಗಳು ಈ ಚಿಕ್ಕ ಬಾಲಕನಲ್ಲಿಯ ಕಲಾ ಪ್ರತಿಭೆಯನ್ನು ಕಂಡು ಮೆಚ್ಚುಗೆಯನ್ನು ವ್ಯಕ್ತಪಡಿಸಿ ಪ್ರೋತ್ಸಾಹಿಸುತ್ತಿದ್ದರು.

ತಂದೆ ಕಾಳಾಚಾರ್ಯರು ಮಗನಲ್ಲಿರುವ ಸುಪ್ತಕಲಾ ಪ್ರಜ್ಞೆಯನ್ನು ಗುರುತಿಸಿ ಶಾಲಾಭ್ಯಾಸವನ್ನು ಬಿಡಿಸಿ ತಮ್ಮ ಅನುವಂಶೀಯವಾಗಿ ಬಂದ ಲೋಹಶಿಲ್ಪ, ಕಾಷ್ಠಶಿಲ್ಪ, ಯಕ್ಷಗಾನ ಸೂತ್ರದ ಗೊಂಬೆಯಾಟ ಮುಂತಾದವುಗಳಲ್ಲಿ ವಿಶೇಷ ತರಬೇತಿಯನ್ನು ನೀಡಿ, ಮಾರ್ಗದರ್ಶನ ಮಾಡಿ ಒಂದು ಸಜೀವ ಶಿಲ್ಪವನ್ನಾಗಿ ಮಾಡಿದರು.

## ರಾಣಿಬೆನ್ನೂರಿಗೆ

ಎರೆಕುಪ್ಪೆ ಗ್ರಾಮೀಣ ಪ್ರದೇಶ. ಇವರ ತಂದೆ ಕಾಳಚಾರ್ಯರು ನಗರ ಪ್ರದೇಶವಾದ ರಾಣೇಬೆನ್ನೂರಿಗೆ ಇವರನ್ನು ಕರೆದುಕೊಂಡು ಹೋಗಲು ನಿರಾಕರಿಸುತ್ತಿದ್ದರು. ಒಂದು ಸಲ ರಾಣೆ ಬೆನ್ನೂರಲ್ಲಿ ಒಂದು ಮನೆಯ ಕಟ್ಟಡದ ಕೆಲಸವನ್ನು ಮಾಡಲು ಹಿಡಿದುಕೊಂಡಿದ್ದರು. ಇದೇ ಸಂದರ್ಭದಲ್ಲಿ ತಮ್ಮ ತಂದೆಯವರೊಡನೆ ರಾಣೇಬೆನ್ನೂರಿಗೆ ೧೯೬೨ರಲ್ಲಿ ಬಂದರು. ಇವರು ಹಿಡಿದುಕೊಂಡ ಕೆಲಸ ಪೂರ್ಣವಾದ ಮೇಲೆ ಮನೆಯ ಮಾಲೀಕರು ಈ ಹೊಸ ಮನೆಗೆ ಪ್ರವೇಶ ಮಾಡಿದರು. ಅವರು ವಾಸವಾಗಿದ್ದ ಮನೆ ಖಾಲಿಯಾಯಿತು. ಮಾಲೀಕರ ಒಪ್ಪಿಗೆಯನ್ನು ಪಡೆದು ಖಾಲಿಯಾದ ಮನೆಯಲ್ಲಿ ವಾಸಿಸತೊಡಗಿದರು. ನಂತರ ಸಪ್ಪಣ್ಣನವರ ವಕೀಲರ ಮನೆಯ

ಕೆಲಸವನ್ನು ಹಿಡಿದುಕೊಂಡರು. ಅದೇ ಸಂದರ್ಭದಲ್ಲಿ "ಅಮರಶಿಲ್ಪಿ ಜಕಣಾಚಾರಿ" ಎಂಬ ಚಲನಚಿತ್ರದ ಪ್ರದರ್ಶನ ನಡೆಯುತ್ತಿತ್ತು. ಒಂದು ದಿನ ತಂದೆಯ ಕಣ್ಣು ತಪ್ಪಿಸಿ ಈ ಚಲನಚಿತ್ರವನ್ನು ನೋಡಿದರು. ತಕ್ಷಣ ಅವರ ಮನಸ್ಸು ಪರಿವರ್ತನೆಗೊಂಡು ಶಿಲೆಯನ್ನು ಶಿಲ್ಪವನ್ನಾಗಿ, ಕಲೆಯನ್ನಾಗಿ ಮಾಡುವ ಸುಪ್ತವಾದ ಪ್ರಜ್ಞೆಯು ಜಾಗೃತವಾಯಿತು. ದೈವಲೀಲೆ ಎಂಬಂತೆ ಇದೇ ಸಮಯದಲ್ಲಿ ನಾಲ್ಕೂವರೆ ಅಡಿ ಎತ್ತರದ "ಮಹಿಷಾಸುರ ಮರ್ದಿನಿ" ವಿಗ್ರಹವನ್ನು ತಯಾರಿಸಿಕೊಡಲು ರಟ್ಟೀಹಳ್ಳಿಯ ಜನತೆಯಿಂದ ಆಗ್ರಹ ಬಂದಿತು. ಈ ಸಂಗತಿಯನ್ನು ಸಪ್ಪಣ್ಣನವರ ವಕೀಲರಿಗೆ ತಿಳಿಸಿದಾಗ ಅವರು ತಮ್ಮ ಮನೆಯ ಕೆಲಸ ತಡವಾದರೂ ಚಿಂತೆ ಇಲ್ಲ, ಮೊದಲು "ಮಹಿಷಾಸುರ ಮರ್ದಿನಿ ವಿಗ್ರಹವನ್ನು ತಯಾರಿಸಿಕೊಡಿರಿ" ಎಂದು ಹೇಳಿ ಪ್ರೋತ್ಸಾಹಿಸಿದರು. ಇದರಿಂದ ಮಹಿಷಾಸುರ ಮರ್ದಿನಿ ಕಲಾಕೃತಿ ಅರಳಿನಿಂತಿತು. ಇದು ವೀರಾಚಾರ್ಯರು ರಾಣೇಬೆನ್ನೂರಿನಲ್ಲಿ ಸೃಷ್ಟಿಸಿದ ಪ್ರಥಮ ಶಿಲ್ಪ ಕಲಾಕೃತಿಯಾಯಿತು. ನಂತರ ಶಿಲ್ಪಕಲೆಯನ್ನೇ ಆಶ್ರಯಿಸಿ ವೃತ್ತಿಯನ್ನಾಗಿ ಮುಂದುವರೆಸಿಕೊಂಡು ಹೋಗಲು ರಾಣೇಬೆನ್ನೂರಿನಲ್ಲಿಯೇ ನೆಲೆಯೂರಿದರು. ೧೯೪೪ರಲ್ಲಿ ಹದಿನೆಂಟನೆಯ ವಯಸ್ಸಿನಲ್ಲಿ ವಿವಾಹವಾಯಿತು. ಇಬ್ಬರು ಗಂಡು, ಮೂವರು ಹೆಣ್ಣು ಮಕ್ಕಳಾದರು. ಅನಿರೀಕ್ಷಿತವಾಗಿ ಅವರ ಧರ್ಮಪತ್ನಿ ತೀರಿಹೋದದ್ದರಿಂದ ೧೯೬೯ರಲ್ಲಿ ಪುನಃ ವಿವಾಹವಾದರು. ಇದರಿಂದ ಮೂವರು ಗಂಡು ಹಾಗೂ ಒಂದು ಹೆಣ್ಣು ಮಗುವಾಯಿತು. ತುಂಬು ಸಂಸಾರದೊಂದಿಗೆ ಅವರ ಶಿಲ್ಪವೃತ್ತಿಯನ್ನು ಶ್ರದ್ಧೆಯಿಂದ ಮಾಡತೊಡಗಿದರು. ಅವರ ಅವಿರತ ಸ್ವಸಾಧನೆಯ, ಶ್ರದ್ಧೆಯ ಫಲವಾಗಿ ಸಾವಿರಕ್ಕೂ ಹೆಚ್ಚು ಶಿಲ್ಪಕಲಾಕೃತಿಗಳ ಸೃಷ್ಟಿಕರ್ತರಾಗಿದ್ದಾರೆ.

ಇವರು ರಚಿಸಿದ ಶಿಲ್ಪಗಳು ಮುಖ್ಯವಾಗಿ ಗಣೇಶ, ಕಾಳಿಕಾದೇವಿ, ದತ್ತಾತ್ರೇಯ, ನವಗ್ರಹಗಳು, ಮಾರ್ಕಾಂಡೇಯ, ವೀರಭದ್ರೇಶ್ವರ, ಸತ್ಯನಾರಾಯಣ, ಕನ್ನಿಕಾಪರಮೇಶ್ವರಿ, ಈಶ್ವರ-ನಂದಿ, ಪಾರ್ವತಿ ಆದಿಶಕ್ತಿ, ರಾಮ-ಲಕ್ಷ್ಮಣ, ಸೀತಾ ಆಂಜನೇಯ, ಹಯಗ್ರೀವ, ನಾಗಪಾಲ, ಪಾಲನಾಥ, ಬಸವೇಶ್ವರ, ಬ್ರಹ್ಮ, ವಿಷ್ಣು, ಮಹೇಶ್ವರ, ಷಣ್ಮುಖ, ನಟರಾಜ, ಮರುಳಸಿದ್ಧ ಸ್ವಾಮಿಗಳು. ಶಿವಕುಮಾರ ಸ್ವಾಮಿಗಳಿಗೆ ಆಶೀರ್ವದಿಸಿದ್ದ, ಅನ್ನಪೂರ್ಣೇಶ್ವರಿ, ಕರಿಬಸವೇಶ್ವರ, ಮರುಳಸಿದ್ದೇಶ್ವರ, ಅಂಬಾ ಭವಾನಿ, ಚೌಡೇಶ್ವರಿ, ಅಕ್ಕಮಹಾದೇವಿ, ಊರಮ್ಮ, ಸ್ವಾತಂತ್ರ ಹೋರಾಟಗಾರ ಕೊಟ್ಟೂರ ಬಸವಗೌಡರ ಶಿಲ್ಪ, ದುರ್ಗಾದೇವಿ, ಸುಬ್ರಹ್ಮಣ್ಯ, ರಾಘವೇಂದ್ರ ಸ್ವಾಮಿಗಳು, ವಿಠ್ಠಲ-ರುಕ್ಮಾಯಿ, ಸೇವಾಲಾಲ್, ಜಮದಗ್ನಿ, ಪರಶುರಾಮ, ರೇಣುಕಾಚಾರ್ಯ, ಕನಕದಾಸರು, ರಾಮಲಿಂಗೇಶ್ವರ, ಶನೇಶ್ವರ, ಚೌಡೇಶ್ವರಿ, ಉಮಾಮಹೇಶ್ವರಿ, ಎಡೆಯೂರ ಸಿದ್ಧಲಿಂಗೇಶ್ವರ ಮುಂತಾಗಿ ಸಾವಿರಕ್ಕೂ ಹೆಚ್ಚು ಶಿಲ್ಪ ಕಲಾಕೃತಿಗಳು ಇವರ ಹಸ್ತದಿಂದ ಸೃಷ್ಟಿಯಾಗಿ ಭಕ್ತಿಯ ತಳಪಾಯವನ್ನು ಹಾಕಿವೆ.

ಇವರು ಶಿಲ್ಪಿಸಿದ ವಿಗ್ರಹಗಳು ಧಾರವಾಡ, ಹರಿಹರ, ಸೊಂಡೂರು, ನಾಸಿಕ, ಗೋವಾ, ಬೆಳಗಾಂವ, ಹಂಸಬಾವಿ, ದಾವಣಗೆರೆ, ಶಿವಮೊಗ್ಗಾ, ತರೀಕೆರೆ, ಸಾಗರ, ಸೊರಬ, ಬೆಂಗಳೂರು, ಹಾವೇರಿ, ಸಿರಿಗೆರೆ, ಮಾಣಿಕನಗರ, ಲಕ್ಷ್ಮೇಶ್ವರ, ಬಳ್ಳಾರಿ, ಮುದ್ದೇಬಿಹಾಳ, ಹುಬ್ಬಳ್ಳಿ, ಭದ್ರಾವತಿ, ಶಿರಸಂಗಿ, ಮಾಣಿಕನಗರ, ರಾಣೇಬೆನ್ನೂರು, ಚನ್ನಗಿರಿ, ಆನವಟ್ಟಿ, ಹರಿಯಾಣ, ರಟ್ಟೀಹಳ್ಳಿ,

ಇತ್ಯಾದಿ ನಗರ ಪ್ರದೇಶಗಳಲ್ಲಿ, ಅಲ್ಲದೇ ನೂರಾರು ಗ್ರಾಮೀಣ ಪ್ರದೇಶಗಳ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗೊಂಡು ಆಸ್ತಿಕರಲ್ಲಿ ಧಾರ್ಮಿಕ ಪ್ರಜ್ಞೆಯನ್ನು ಜಾಗೃತಗೊಳಿಸುವಲ್ಲಿ ಅಗ್ರಸ್ಥಾನ ಪಡೆದಿದೆ.

ಇವರ ಕಾಷ್ಠ ಶಿಲ್ಪಿಗಳು, ರಾಣೇಬೆನ್ನೂರಿನಲ್ಲಿರುವ ಗಂಗಾಜಲ ಚೌಡೇಶ್ವರಿ, ದುರ್ಗಾದೇವಿ, ಮಾರ್ಕಾಂಡೇಯ, (ಹರಿಹರದಲ್ಲಿರುವ) ಶಿವಾಜಿಗೆ ಅಂಬಾಭವಾನಿ ಖಡ್ಗ ಕೊಟ್ಟದ್ದು, ಹರಪನಹಳ್ಳಿ ತಾಲ್ಲೂಕಿನ ಅಗಳವಾಡಿಯಲ್ಲಿರುವ ದುರ್ಗಾದೇವಿ, ಹರಿಹರ ತಾಲ್ಲೂಕಿನ ಕೊಂಡಜ್ಜಿಯಲ್ಲಿರುವ ಗ್ರಾಮದೇವತೆ, ರಾಣೇಬೆನ್ನೂರ ತಾಲ್ಲೂಕ ಹರನಗರಿಯಲ್ಲಿರುವ ಗ್ರಾಮ ದೇವತೆ, ಮಾರನಾಯಕನ ಹಳ್ಳಿಯಲ್ಲಿರುವ ದುರ್ಗಾದೇವತೆ ಇತ್ಯಾದಿ. ಅಲ್ಲದೇ ಕಾಲಿಲ್ಲದವರಿಗೆ ಮರದ ಕಾಲುಗಳನ್ನು ತಯಾರಿಸಿಕೊಟ್ಟು ನಡೆದಾಡುವಂತೆ ಮಾಡಿದ ಶ್ರೇಯಸ್ಸೂ ಇವರಿಗೆ ಸಲ್ಲುವಂತಹದ್ದು. ಇವರು ಪೆನ್ಸಿಲ್‌ದಿಂದ ಚಿತ್ರಿಸಿದ ಕಲಾಕೃತಿಗಳು ಶ್ರೀಶೈಲ ಮಲ್ಲಿಕಾರ್ಜುನ ಸ್ವಾಮಿಗಳ ಭಾವಚಿತ್ರ, ಗದುಗಿನ ಶಿವಾನಂದ ಸ್ವಾಮಿಗಳವರ ಭಾವಚಿತ್ರಗಳು ಮುಂತಾದವು.

## ಯಕ್ಷಗಾನದ ಗೊಂಬೆಗಳು

ಯಕ್ಷಗಾನ ಕ್ಷೇತ್ರದ ಸೂತ್ರದ ಗೊಂಬೆಯಾಟದಲ್ಲಿ ಇವರು ಸಿದ್ಧಹಸ್ತರು. ಕನ್ನಡ ಸಂಸ್ಕೃತಿ-ನಿರ್ದೇಶನಾಲಯದ ನೆರವಿನಿಂದ ಇವರು ರಾಜಸ್ಥಾನ, ಉದಯಪುರ, ಬೆಲ್‌ವಾರ್, ಜಯಪುರ, ಜೋಧಪುರ, ಮುಂತಾದ ಹೊರಗಿನ ಪ್ರಸಿದ್ಧ ಪಟ್ಟಣಗಳಲ್ಲಿ ಹಲವಾರು ಯಕ್ಷಗಾನ ಸೂತ್ರ ಗೊಂಬೆಯಾಟದ ಪ್ರದರ್ಶನಗಳನ್ನು ಪ್ರದರ್ಶಿಸಿ ಯಶಸ್ಸನ್ನು ಗಳಿಸಿದ್ದಾರೆ. ಜನತೆ ಮುಕ್ತ ಕಂಠದಿಂದ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ಅಲ್ಲದೇ ಬೆಂಗಳೂರು ರವೀಂದ್ರ ಕಲಾಕ್ಷೇತ್ರದಲ್ಲಿ, ವಿಧಾನ ಸೌದದ ಬ್ಯಾಂಕ್ವೆಟ್ ಹಾಲಿನಲ್ಲಿ, ಹುಬ್ಬಳ್ಳಿಯ ಗ್ರಾಮೋದ್ಯೋಗ ಪರಿಷತ್ತಿನಲ್ಲಿ, ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ, ಹುಬ್ಬಳ್ಳಿಯ ಸರಾಫಗಟ್ಟೆಯಲ್ಲಿ, ಹರಿಹರ, ದಾವಣಗೆರೆ, ಸೊರಬ, ರಾಣೇಬೆನ್ನೂರು ಮುಂತಾದ ನಗರ ಪ್ರದೇಶಗಳಲ್ಲಿ, ಅಲ್ಲದೇ ಗ್ರಾಮೀಣ ಪ್ರದೇಶಗಳಲ್ಲೂ ನೂರಾರು ಸೂತ್ರದ ಗೊಂಬೆಯಾಟಗಳನ್ನು ಪ್ರದರ್ಶಿಸಿ ಯಕ್ಷಗಾನ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ಕೊಟ್ಟಿದ್ದಾರೆ. ಯಕ್ಷಗಾನ ಸೂತ್ರದ ಗೊಂಬೆಯಾಟಕ್ಕೆ ಕರ್ನಾಟಕ ರಾಜ್ಯಪಾಲರಾಗಿದ್ದ ಮೋಹನಲಾಲ್ ಸುಖಾಡಿಯಾ ಅವರು ರಾಜ್ಯಪ್ರಶಸ್ತಿ ಪ್ರದಾನ ಮಾಡಿ ಗೌರವಿಸಿದ್ದಾರೆ. ಕನಕಾಂಗಿ ಕಲ್ಯಾಣ, ಲವಕುಶರ ಕಾಳಗ, ದಕ್ಷಯಜ್ಞ, ಗಜಗೌರಿವ್ರತ, ಮುಂತಾದವು ಇವರು ಪ್ರದರ್ಶಿಸುವ ಸೂತ್ರದ ಗೊಂಬೆಯಾಟಗಳು. ಅಲ್ಲದೇ ತಮ್ಮ ಸೂತ್ರದ ಗೊಂಬೆಯಾಟಕ್ಕೆ ಬೇಕಾಗುವ ಗೊಂಬೆಗಳನ್ನು ತಾವೇ ತಯಾರಿ ಮಾಡಿಕೊಳ್ಳಬಲ್ಲವರು. ಅಲ್ಲದೇ ಹಾರ್ಮೋನಿಯಂ, ಮೃದಂಗ, ಮುಂತಾದ ವಾದ್ಯಗಳನ್ನು ನಡೆಸುವುದರಲ್ಲಿಯೂ ನೈಪುಣ್ಯತೆಯನ್ನು ಪಡೆದಿದ್ದರು.

ಹೀಗೆ ಹಲವಾರು ಕ್ಷೇತ್ರಗಳಲ್ಲಿ ಸಾಧನೆ ಮಾಡಿ ಯಾವ ಪ್ರಶಸ್ತಿಗಳಿಗಾಗಿ ಬಿರುದು - ಬಾವಲಿಗಳಿಗಾಗಿ ಸೇವೆ ಸಲ್ಲಿಸಿದವರಲ್ಲ. ಅವರ ಶಿಲ್ಪಕಲಾಭಿವೃದ್ಧಿ ಅಮೋಘವಾದುದು. ತಾವು ಕಲಿತ ವಿದ್ಯೆಯನ್ನೂ ಕಲಿಯಲು ಬಂದ ಅಭಿಲಾಷಿಗಳಿಗೆ ಕಲಿಸಲು ಹಾಗೂ ಮಾರ್ಗದರ್ಶನ ಮಾಡಲು ತುಂಬಾ ಉತ್ಸುಕರಾಗಿದ್ದರು. ಅಲ್ಲದೇ ಹಲವಾರು ಶಿಷ್ಯರುಗಳನ್ನು ತಯಾರಿಸಿ ಶಿಲ್ಪ

ಪರಂಪರೆಯು ಮುಂದುವರೆಯುವಂತೆ ಮಾಡಿದ್ದಾರೆ. ಈ ಶಿಷ್ಯರುಗಳಲ್ಲಿ, ಶಿಲ್ಪಿ ಮಹಾರುದ್ರಪ್ಪ, ಶಿಲ್ಪಿ ವೀರಬಸಪ್ಪ, ಶಿಲ್ಪಿ ಚನ್ನವೀರಪ್ಪ, ಶಿಲ್ಪಿ ಕಲವೀರಪ್ಪ, ಶಿಲ್ಪಿ ವೀರಭದ್ರಪ್ಪ, ಶಿಲ್ಪಿ ಪೂರ್ವಾಚಾರಿ, ಶಿಲ್ಪಿ ಸಣ್ಣವೀರಾಚಾರಿ, ಶಿಲ್ಪಿ ಮಂಜುನಾಥ ಮುಂತಾದವರು ಪ್ರಮುಖರಾಗಿದ್ದಾರೆ. ಇವರ ಶಿಲ್ಪ ಕೃತಿಗಳು ನಾಡಿನ ಎಲ್ಲ ದಿಶೆಗಳಲ್ಲೂ ಪ್ರತಿಷ್ಠಾಪನೆಗೊಂಡು ಪೂಜೆಗೊಳ್ಳುತ್ತಲಿವೆ. ವೀರಾಚಾರ್ಯರು ಬಹುಮುಖ ಪ್ರತಿಭಾವಂತ ವ್ಯಕ್ತಿಗಳು, ಆಡಂಬರ ರಹಿತ, ಜೀವನ ಸಾಗಿಸುತ್ತಿದ್ದರು. ಸರಳ ಉಡುಪಿನ ಸಜ್ಜನಿಕೆಯ ವ್ಯಕ್ತಿಗಳಾಗಿದ್ದರು. ಕಲೆಗಾಗಿಯೇ ತಮ್ಮ ಜೀವನವನ್ನು ಮುಡಿಪಾಗಿಟ್ಟು ಅರ್ಪಿಸಿದ ಮೇಧಾವಿಗಳು.

ವೀರಾಚಾರ್ಯರು ಈಗ ಇಹಲೋಕದಲ್ಲಿ ಇಲ್ಲವಾದರೂ ಅವರ ಶಿಲ್ಪಕಲಾ ಪರಂಪರೆಯನ್ನು ಅವರ ಮಕ್ಕಳು, ಮೊಮ್ಮಕ್ಕಳು ಹಾಗೂ ಶಿಷ್ಯರು ಮುಂದುವರಸಿಕೊಂಡು ಹೋಗುತ್ತಲಿದ್ದಾರೆ. ಅವರ ಜೀವನ ನಶ್ವರವಾದರೂ ಅವರ ಶಿಲ್ಪಿಸಿದ ರೂಪಗಳು ಎಂದಿಗೂ ಅಮರವಾಗಿ ನಿಲ್ಲುವಂತಹುಗಳಾಗಿವೆ.



# ಎಲ್. ಪಿ. ಅಂಚನ್

ಬಿ. ವಿ. ಕೆ ಶಾಸ್ತ್ರಿ

ಹದಿನಾರು ವರುಷಗಳ ಹಿಂದೆ. ಬೆಂಗಳೂರು ಕಸ್ತೂರ್ ಬಾ ರಸ್ತೆಯಲ್ಲಿರುವ 'ವಿಶ್ವೇಶ್ವರಯ್ಯ ತಾಂತ್ರಿಕ ವಸ್ತು ಸಂಗ್ರಹಾಲಯ'ದವರು ಒಂದು ವಿಶೇಷ ಕಲಾಶಿಬಿರವನ್ನು ಏರ್ಪಡಿಸಿದ್ದರು. ಅದರ ಹೆಸರು 'ಟೆಕ್ನೊ ಆರ್ಟ್-೮೨' ಅದರ ಉದ್ದಿಶ್ಯ. ಈ ತಾಂತ್ರಿಕ ಯುಗದ ಬಗೆಗೆ ಕಲಾವಿದರ ಪ್ರತಿಕ್ರಿಯೆ. ಶಿಲ್ಪದ ಮೂಲಕ ಅದರ ಅಭಿವ್ಯಕ್ತಿ. ಕೆ ಕೆ ಹೆಬ್ಬಾರರ ನೇತೃತ್ವದಲ್ಲಿ ನಡೆದ ಈ ಶಿಬಿರವನ್ನು ಪ್ರಸಿದ್ಧ ಕಲಾವಿದ ಚಿಂತಾಮಣಿ ಕಾರ್‌ಅವರು ಉದ್ಘಾಟಿಸಿದರು. ಸುಮಾರು ಒಂದು ವಾರ ಕಾಲ ನಡೆದ ಆ ಶಿಬಿರದಲ್ಲಿ ಭಾರತದ ವಿವಿಧ ಭಾಗಗಳಿಂದ ಬಂದ, ಪಂಜಾಬಿನ ಶಿವಸಿಂಗ್, ಬರೋಡದ ರಾಘವ ಕನೇರಿಯ ಶಾಂತಿನಿಕೇತನದಿಂದ ಅಜಿತ್ ಚಕ್ರವರ್ತಿ ಮತ್ತು ಶರ್ಬರಿರಾಯ್ ಚೌಧುರಿ, ತಮಿಳುನಾಡಿನ ವಿದ್ಯಾಶಂಕರ ಶರ್ಮ, ಕೇರಳದ ಕನ್ಹಯ್ಯಾ ಕುನ್ಹಿರಾಮನ್, ಕರ್ನಾಟಕದ ಎಸ್ ಜಿ ವಾಸುದೇವ್, ಜಿ ಎಸ್ ಶೆಣೈ, ಯು. ಭಾಸ್ಕರರಾವ್ ಮುಂತಾದವರು ಭಾಗವಹಿಸಿದ್ದರು ಮತ್ತು ಅವರ ಅವರ ಕಲ್ಪನೆಗಳಿಗನುಸಾರ ಕೃತಿಗಳನ್ನು ನಿರೂಪಿಸಿದರು.

ಶಿವ್‌ಸಿಂಗ್‌ರವರದು ಕಬ್ಬಿಣದ ತಾಳೆಮರ ರೀತಿಯ ಶಿಲ್ಪ. ತಲೆ ಕೆಳಗಾದ ಪ್ರಶ್ನೆ ಸೂಚನೆ ಚಿಹ್ನೆಯಂತಿದ್ದದು ರಾಘವ ಕನೇರಿಯಾರವರ ಶಿಲ್ಪ, ಸೆಟೆದು ನಿಂತು ಘನೀಭೂತ ಸರಪಳಿಯಂತಿದ್ದ ಕುನ್ಹಿ ರಾಮನ್‌ರವರ ಶಿಲ್ಪ, ಮುಂತಾದುವುಗಳು ನಿರ್ಮಿತವಾದವು. ಇವುಗಳೆಲ್ಲಾ ಚಮತ್ಕಾರಪೂರಿತವಾದುವೇನೋ ಸರಿ, ಆದರೆ ಈ ತಾಂತ್ರಿಕ ಯುಗದ ಒಂದು ಮುಖ್ಯ ಪದಾರ್ಥ, ವಿದ್ಯುಚ್ಛಕ್ತಿಯ ಪ್ರಭಾವವೂ ಈ ಶಿಲ್ಪಗಳಲ್ಲಿ ಅನುಭವವಾಗಬೇಡವೇ? ಅಂತಹವೂ ಕೆಲವು ಶಿಲ್ಪಗಳಿದ್ದವು. ಇದರಲ್ಲಿ ಅಜಿತ್ ಚಕ್ರವರ್ತಿಯವರ ಮುಖವಾಡ ನೆನಹಿಗೆ ಬರುತ್ತದೆ. ಅದರ ಎರಡೂ ಕಣ್ಣುಗಳೂ ಜ್ವಲಿಸುತ್ತಿದ್ದುವು ಹಿಂದುಗಡೆ ವಿದ್ಯುಚ್ಛಕ್ತಿ ದೀಪಗಳನ್ನು ಹುದುಗಿಸಿದ್ದುದರಿಂದ. ಹಾಗೆಯೇ ವಾಸುದೇವ್ ಅವರ ಶಿಲ್ಪವೂ ಸಹ. ಬೋರಲು ಹಾಕಿದ ಕೊಳದಪ್ಪಲೆಯನ್ನು ಹೋಲುತ್ತಿದ್ದ ಈ ಶಿಲ್ಪದ ವಿಶೇಷವೆಂದರೆ, ಭೂಮಿಯಂತೆ ನಿಧಾನವಾಗಿ ತಿರುಗುತ್ತಿದ್ದು, ಬೆಳಕು ಚೆಲ್ಲುವ ಕಿಂಡಿಗಳಿಂದ ಕೂಡಿತ್ತು. ಕಾರಣ ಒಳಗಡೆ ವಿದ್ಯುಚ್ಛಕ್ತಿ ದೀಪಗಳನ್ನು ಸ್ಥಾಪಿಸಲಾಗಿತ್ತು. ಹಾಗೆಯೇ ಹೂವಿನ ಗಿಡಗಳ ಪೊದೆಯ ನೆನೆಪುಂಟು ಮಾಡುತ್ತಿದ್ದ ಇನ್ನೊಂದು ಶಿಲ್ಪ-ಹತ್ತಿರದಿಂದ ನೋಡಿದರೆ ಹೂಗಳ ಬದಲು ಬೆಳಕು ಮಿನುಗುತ್ತಿತ್ತು-ಸಣ್ಣ ವಿದ್ಯುದ್ದೀಪಗಳನ್ನು ಒಳಗೆ ಅಡಕ ಮಾಡಿದ್ದರಿಂದ ದೂರದಿಂದ ಒಟ್ಟು ಶಿಲ್ಪವನ್ನು ನೋಡಿದರೆ ಸ್ಕಲ್ ಅಥವಾ ತಲೆ ಬುರುಡೆಯಂತೆ, ಭ್ರಮೆ

:ಂರಿಸುತ್ತಿತ್ತು. ಇದನ್ನು ರಚಿಸಿದವರು ಎಲ್ ಪಿ ಅಂಚನ್. ನನಗೆ ಅವರ ಪರಿಚಯವಾದುದೂ ಆ ಸಂದರ್ಭದಲ್ಲಿಯೇ.

**ಎಲೆಮರೆಯ ಕಾಯಿ**

ಅದಕ್ಕೂ ಮೊದಲು ಅಂಚನ್‌ರವರು ಅವರ ಕೃತಿಗಳಿಂದ ಪರಿಚಿತರಾಗಿದ್ದರು. ಆದರೆ ಈ ಶಿಬಿರದಲ್ಲಿ ನಾನೂ ಒಂದು ರೀತಿಯಲ್ಲಿ ಭಾಗಿಯಾಗಿದ್ದುದರಿಂದ, ಅವರು ಮುಖತಃ ಪರಿಚಯವಾಗಿ ಅವರೊಂದಿಗೆ ಸ್ವಲ್ಪ ಕಾಲ ಕಳೆವ ಅವಕಾಶವೂ ದೊರೆಯಿತು. ಪರಿಚಯವಾದ ನಂತರ, ಅವರನ್ನು ಈ ಹಿಂದೆ ಕಲಾಪ್ರದರ್ಶನಗಳಲ್ಲಿ ನೋಡಿದ್ದ ನೆನಪೂ ಬಂದಿತು. ಆದರೆ ಆಗ ಆ ವ್ಯಕ್ತಿ ಯಾರು ಎಂಬುದು ತಿಳಿದಿರಲಿಲ್ಲ. ಅಲ್ಲದೆ ಅಂಚನ್‌ರವರೂ ಮುಂದೆ ನುಗ್ಗಿ ಯಾರನ್ನಾದರೂ ಪರಿಚಯ ಮಾಡಿಕೊಳ್ಳುವ ಅಥವಾ ತಮ್ಮನ್ನೇ ಪರಿಚಯಿಸಿಕೊಳ್ಳುವ ಸ್ವಭಾವದವರೂ ಅಲ್ಲ. ಒಂದು ರೀತಿ ಎಲೆ ಮರೆಯ ಕಾಯಿಯಂತಹ ಜೀವನ ಅವರದು. ಅಥವಾ ಎಲೆಯನ್ನೇ ಎಳೆದು ಕೊಂಡು ಅದರ ಹಿಂದೆ ಮರೆಯಾಗಿಕೊಳ್ಳುವಂತಹ ಸ್ವಭಾವ ಅಂಚನ್‌ರವರದು ಎಂದರೂ ತಪ್ಪಾಗಲಾರದು.

ಆ ಶಿಬಿರದ ಸಂದರ್ಭದಲ್ಲಿ ಅಂಚನ್‌ರವರೊಡನೆ ಕಳೆದ ಕಾಲ ಸ್ವಾರಸ್ಯವಾದುದು. ಅವರ ವಿಧ ವಿಧ ಕಲ್ಪನೆಗಳು. ಅದಕ್ಕೆ ರೂಪು ಕೊಡಲು ಅನುಸರಿಸುವಂತಹ ತಂತ್ರ ವಿಧಾನಗಳು. ಮಾಧ್ಯಮಗಳು ಮುಂತಾದವುಗಳ ಬಗೆಗೆ ನಮ್ಮ ಮಾತು ಕತೆಗಳು ನಡೆಯುತ್ತಿದ್ದುವು. ಅದರಲ್ಲಿ ಕೆಲವು ವಿಧಾನಗಳು ಹಿಂದಿನಿಂದಲೂ ಬಂದಂತಹವು. ಕೆಲವು ಹಿಂದಿನಿಂದಲೂ ಬಂದವುಗಳಿಗೆ ವಿಶೇಷ ತಿರುವು ಪಡೆದಂತಹವು. ಇನ್ನು ಕೆಲವುದರಲ್ಲಿ ಸ್ವಂತಿಕೆ ಅನುಭವವಾಗುತ್ತಿತ್ತು. ಕೆಲವು ಕನಸಿನ ಪ್ರಾಕಾರಕ್ಕೂ ಸೇರಿದಂತಿದ್ದವು. ಈ ಹೊಸ ಕಲ್ಪನೆ ಮತ್ತು ವಿಧಾನಗಳನ್ನು ಪ್ರಚಾರಗೊಳಿಸುವ ಒಂದು ಹಂಬಲವೂ ಕಾಣ ಬರುತ್ತಿತ್ತು.

ಮಂಗಳೂರಿನಲ್ಲಿ ಜನಿಸಿದ (೨೭-೮-೧೯೨೭) ಲಿಂಗಪ್ಪ ಪೂವಪ್ಪ ಅಂಚನ್‌ರವರ ಜೀವನದ ಪೂರ್ವಭಾಗವೆಲ್ಲಾ ಕಷ್ಟಮಯ ಬದುಕಿನ ಹೋರಾಟ. ಹುಟ್ಟಿದುದು ಕಡುಬಡವರ ಕುಟುಂಬದಲ್ಲಿ ಕಷ್ಟದಿಂದ ಮತ್ತು ಹಠದಿಂದ ವಿದ್ಯಾಭ್ಯಾಸ ಮಾಡಿದವರು ಅಂಚನ್. ಮಂಗಳೂರಿನ ಸರಕಾರಿ ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡಿ ಎಸ್ ಎಸ್ ಎಲ್ ಸಿ ಯಲ್ಲಿ ಪಾಸಾದರು. ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗಲೂ ಕಲಾವಿದನಾಗಬೇಕೆಂಬ ಕನಸು. ಆದರೆ ಮನೆಯವರಿಂದ ಪ್ರೋತ್ಸಾಹವಂತಿರಲಿ, ವಿರೋಧ. ಕೊನೆಗೆ ಯಾರಾರದೋ ಸಹಾಯ ಪಡೆದು. ಮುಂಬೈಗೆ ಪ್ರಯಾಣ. ಅಂದು ಎಲ್ಲರ ಗುರಿಯೂ ಬೊಂಬಾಯಿಯೇ. ಅಲ್ಲಿ ಜಿ ಎಸ್ ದಂಡಾವತಿ ಮಠ ಅವರ ನೇತೃತ್ವದಲ್ಲಿ ನಡೆಯುತ್ತಿದ್ದ ನೂತನ ಕಲಾಮಂದಿರಕ್ಕೆ ಸೇರಿದರು. ಅಲ್ಲಿ ೧೯೫೭ರವರೆಗೂ ಕಲಾ ವ್ಯಾಸಂಗ ಮಾಡಿ ಆ ವರುಷ ಸರ್ ಜೆ ಜೆ ಕಲಾಶಾಲೆಯ ಡಿಪ್ಲೋಮಾವನ್ನೂ ಪಡೆದರು. ಮುಂದೆ ಎರಡು ಮೂರು ವರುಷ ಕಾಲ ಅಲ್ಲಿಯೇ ಅಧ್ಯಾಪಕ ವೃತ್ತಿ. ಇದು ಒಂದು ರೀತಿಯಲ್ಲಿ ಕಲಾತ್ಮಕವಾಗಿ ತೃಪ್ತಿ ಕೊಟ್ಟರೂ. ಆರ್ಥಿಕವಾಗಿ ಕಠಿಣ ಸ್ಥಿತಿಯನ್ನೆದುರಿಸಬೇಕಾಯಿತು.

ಜೀವನ ಸುಗಮವಾಗುವ ದೃಷ್ಟಿಯಿಂದ ಬೆಂಗಳೂರಿಗೆ ಬಂದು ರಾಜ್ಯದ ವಾರ್ತಾ ಹಾಗೂ ಪ್ರಚಾರ ಇಲಾಖೆಯಲ್ಲಿ ಉದ್ಯೋಗ ಹಿಡಿದ ಅಂಚನ್ ಅವರಿಗೆ ಆರ್ಥಿಕ ಆಸರೆ ದೊರೆತರೂ

ತೃಪ್ತಿಯಿಲ್ಲ. ಒಳಗಿನ ತಳಮಳ, ಮೂರು ನಾಲ್ಕು ವರುಷಗಳ ನಂತರ ಆ ಇಲಾಖೆ ಬಿಟ್ಟು ವಿಶ್ವೇಶ್ವರಯ್ಯ ತಾಂತ್ರಿಕ ಸಂಗ್ರಹಾಲಯದಲ್ಲಿ ಒಂದು ಜವಾಬ್ದಾರಿಯುತ ಸ್ಥಾನಕ್ಕೆ ನೇಮಕರಾದರು. ಯಾವ ಅವಾಂತರ, ಆಡಂಬರಗಳಿಲ್ಲದೆ ಅಲ್ಲಿಯೇ ತಮ್ಮ ಆಸೆಗಳಿಗೆ ಅನುಗುಣವಾಗಿ, ಸ್ವಂತ ಕಲ್ಪನೆಗಳಿಗೆ' ರೂಪುಗೊಟ್ಟು ಜೀವನ ರಥವನ್ನು ನಡೆಯಿಸಿ ೧೯೮೫ರಲ್ಲಿ, ವೃತ್ತಿಯಿಂದ ನಿವೃತ್ತರಾದರು. ಎಂತಹ ಏರುಪೇರುಗಳಿಲ್ಲದೆ ಶಾಂತವಾಗಿದ್ದ ಈ ಜೀವನದಲ್ಲಿಯೂ ಯಾವಾಗಲಾದರೂ ಸುಳಿಗಳು ಏಳುವ ಅಪರೂಪ ಸಂದರ್ಭಗಳು ಬರುವುದೂ ಉಂಟು. ಅಂಚನ್‌ರವರ ಜೀವನದಲ್ಲಿ ಅಂತಹುದೊಂದು ಸಂದರ್ಭವು ನಿವೃತ್ತರಾಗುವ ಒಂದೆರಡು ವರುಷಗಳ ಮುಂಚೆ ನಡೆಯಿತು.

## ವಿಶೇಷ ಘಟನೆ

ಕರ್ನಾಟಕ ರಾಜ್ಯದಲ್ಲಿಯೂ ಮತ್ತು ಹೊರಗಡೆಯೂ ನಡೆಯುತ್ತಿದ್ದ ಕಲಾ ಪ್ರದರ್ಶನಗಳಿಗೆ ಆಗಾಗ ತಮ್ಮ ಕೃತಿಗಳನ್ನು ಕಳುಹಿಸುತ್ತಿದ್ದರು ಅಂಚನ್. ಹಾಗೆಯೇ ರಾಜ್ಯ ಲಲಿತ ಕಲಾ ಅಕಾಡೆಮಿಯ ವಾರ್ಷಿಕ ಕಲಾ ಪ್ರದರ್ಶನಗಳಿಗೂ ತಮ್ಮ ಶಿಲ್ಪಗಳನ್ನು ಕಳುಹಿಸುತ್ತಿದ್ದರು. ೧೯೬೯ರಲ್ಲಿ ಬಹುಮಾನವನ್ನೂ ಪಡೆದರು. ಅನಂತರ ಪುನಃ ೧೨ ವರುಷಗಳ ನಂತರ ಇನ್ನೊಂದು ಶಿಲ್ಪವನ್ನು ಕಳುಹಿಸಿದರು. ಅದೊಂದು ವಿಶೇಷ ರೀತಿಯ ಶಿಲ್ಪ. ಘನಾಕೃತಿ ಯಂತಹುದಲ್ಲ. ಟೊಳ್ಳಾದುದು. ಲೋಹದ ಹಾಳೆಗಳಿಂದ ಮಾಡಿದಂತಹುದು. ಅದರ ಶೀರ್ಷಿಕೆ - 'ಟ್ರೈಬಲ್‌ಗರ್ಲ್' ಅಥವಾ 'ಅರಣ್ಯ ಕನ್ಯೆ' ಎನ್ನೋಣ. ಪೀಠದ ಮೇಲೆ ಕುಳಿತು ಡೋಲನ್ನು ಬಾರಿಸುತ್ತಿರುವ ಬಾಲೆಯ ಶಿಲ್ಪ. ಇದಕ್ಕೆ ಬಹುಮಾನ ದೊರೆಯಲಿಲ್ಲ ತಿರಸ್ಕೃತವಾಯಿತು. ಆದರೆ ಇದು ಅಂಚನ್‌ರವರ ಆತ್ಮವಿಶ್ವಾಸಕ್ಕೆ ಒಂದು ಸವಾಲಿನಂತೆ ಪರಿಣಮಿಸಿತು. 'ಮರಳಿ ಯತ್ನವ ಮಾಡು' ಪದ್ಯದಂತೆ ಮುಂದಿನ ವರುಷದ ಪ್ರದರ್ಶನಕ್ಕೆ ಪುನಃ ಕಳುಹಿಸಿದರು. ಆಗಲೂ ತಿರಸ್ಕೃತವಾಯಿತು. ಹೀಗೆಯೇ ಸಾಲಾಗಿ ಮೂರು ವರುಷಗಳು ಅಂದರೆ ೧೯೮೩ರವರೆಗೂ ತಿರಸ್ಕೃತವಾಗುತ್ತಾ ಬಂದಿತು. ಆದರೆ ಆ ವರುಷ ಇನ್ನೊಂದು ವಿಶೇಷ ನಡೆಯಿತು. ರಾಜ್ಯಮಟ್ಟದಲ್ಲಿ ಸಾಲಾಗಿ ಮೂರು ಸಲ ತಿರಸ್ಕರಿಸಲಾದ ಈ ಬಾಲೆಯ ಶಿಲ್ಪಕ್ಕೆ ರಾಷ್ಟ್ರಮಟ್ಟದ ಮನ್ನಣೆ ದೊರೆಯಿತು. ಕೇಂದ್ರ ಲಲಿತ ಕಲಾ ಅಕಾಡೆಮಿ ದೆಹಲಿಯಲ್ಲಿ ಏರ್ಪಡಿಸಿದ್ದ ೨೭ನೇ ರಾಷ್ಟ್ರೀಯ ಕಲಾ ಪ್ರದರ್ಶನದಲ್ಲಿ ಈ ಕೃತ್ತಿಗೆ ಪ್ರಶಸ್ತಿ ನೀಡಲಾಯಿತು.

ನಮ್ಮಲ್ಲಿ ಇಂತಹ ಆಭಾಸಗಳಾಗುವುದು ಹೊಸದೇನಲ್ಲ. ಶಿಲ್ಪಿ ಶ್ರೀನಿವಾಸಾಚಾರ್ಯರ ನಿದರ್ಶನವೇ ಇದೆಯಲ್ಲ. ಅವರ ಬಹು ಜಾಣ್ಮೆಯಿಂದ, ಎರಡು ಲೋಹಗಳನ್ನು ಕೂಡಿಸಿ ರಚಿಸಿದ ಶಿಲ್ಪ-ಅರ್ಧನಾರೀಶ್ವರ ಬಹುಮಾನಕ್ಕೆ ಯೋಗ್ಯವಲ್ಲವೆಂದು ರಾಜ್ಯಮಟ್ಟದಲ್ಲಿ ತಿರಸ್ಕೃತವಾಯಿತು. ಅದನ್ನು ರಾಷ್ಟ್ರೀಯ ಪ್ರದರ್ಶನಕ್ಕೆ ಕಳುಹಿಸಿದರು. ಅಲ್ಲಿ ಅದಕ್ಕೆ ರಾಷ್ಟ್ರ ಮಟ್ಟದ ಪ್ರಶಸ್ತಿ ದೊರೆಯಿತು. ಅಲ್ಲದೆ ಪ್ರಧಾನಿ ಇಂದಿರಾ ಗಾಂಧಿಯವರು, ಅದನ್ನು ತಮ್ಮ ಕಲಾಸಂಗ್ರಹಾಲಯಕ್ಕೆ ಆರಿಸಿಕೊಂಡರು. ಅವಿವೇಕ ಎನಿಸಿದರೂ, ಇಂತಹ ಅಪರೂಪದ ಘಟನೆಗಳು ನಮ್ಮಲ್ಲಿ ನಡೆದಿವೆ.

ಅಂಚನ್‌ರವರ ಶಿಲ್ಪಗಳೆಲ್ಲಾ ವಿಶೇಷ ರೀತಿಯು ಲೋಹ ಶಿಲ್ಪಗಳಾದರೂ, ಎರಕ ಹುಯ್ದು ಘನೀಭೂತವಾದ ಆಕೃತಿಗಳಲ್ಲ. ಲೋಹದ ತಗಡುಗಳಿಂದ ಅಥವಾ ಹಾಳೆಗಳಿಂದ ಮಾಡಿದಂತಹವು. ಲೋಹದ ತಗುಡುಗಳಿಂದ ಶಿಲ್ಪ ರಚನೆ ಮಾಡುವುದು ಹೊಸ ಪ್ರಯತ್ನವೇನಲ್ಲ. ಹಿಂದಿನಿಂದಲೂ ವ್ಯವಹಾರದಲ್ಲಿದೆ. ನಮ್ಮಲ್ಲಿ ಆಭರಣಗಳ ರಚನೆಯಲ್ಲಿ ಈ ಲೋಹ ಹಾಳೆಯ ವಿಧಾನ ಹಿಂದಿನಿಂದಲೂ ಉಪಯೋಗದಲ್ಲಿ ಇದೆ. ಹಾಗೆಯೇ ತಗಡುಗಳೂ ಸಹ. ಅವುಗಳಿಂದ ಟೊಳ್ಳಾದ ಮೂರ್ತಿ ಶಿಲ್ಪಗಳ ರಚನೆಯಾಗಿದೆ. ಈ ರೀತಿ ತಗಡು. ತೊಕಟೆ, ಎಲೆ ಮುಂತಾದುವುಗಳನ್ನು ಕಲ್ಪನೆಗನುಸಾರ ಕತ್ತರಿಸಿ ಆಕೃತಿಗಳನ್ನು ರಚಿಸುವ ಪದ್ಧತಿ ವಿಶೇಷಕಛೇದ್ಯ, ಪತ್ರಚ್ಛೇದ ಮುಂತಾದ ಹೆಸರುಗಳಿಂದ ನಮ್ಮಲ್ಲಿ ಬಹು ಹಿಂದಿನಿಂದಲೂ ಬಳಕೆಯಲ್ಲಿ ಇದೆ. ನಮ್ಮಲ್ಲಿ ಮಾತ್ರ ಅಲ್ಲದೆ ಬೇರೆಯ ಜನಾಂಗಗಳಲ್ಲಿಯೂ ಬಳಕೆಯಲ್ಲಿದೆ. ಆಧುನಿಕರಲ್ಲಿಯೂ ಪೆವ್‌ನಾ ನಾವುಮ್‌ಗಾಬೋ, ಜ್ಯಾಕೊಮೆಟ್ಟಿ, ಅಲೆಕ್ಸಾಂಡರ್ ಕಾಲ್ದರ್-ಮುಂತಾದವರನೇಕರು ಈ ಮಾಧ್ಯಮವನ್ನು ಉಪಯೋಗಿಸಿದ್ದಾರೆ. ನಮ್ಮಲ್ಲಿಯೂ ಅಂತಹ ಶಿಲ್ಪಗಳಿದ್ದಾರೆ. ಶೊಂಕೋ ಚೌಧುರಿಯವರನ್ನು ನೆನೆಯಬಹುದು. ಅಂಚನ್‌ರವರು ಬಳಸಿರುವುದು ಲೋಹದ ತೆಳು ಹಾಳೆಗಳನ್ನು. ಕಾಗದದಿಂದಲೂ ಇಂತಹ ಶಿಲ್ಪ ರಚನೆ ಮಾಡಿದ್ದರು.

ಅಂಚನ್‌ರವರ ಈ ಶಿಲ್ಪಗಳು ಬಹುತೇಕ ಮೂರ್ತ ಶಿಲ್ಪಗಳೇ, ಅವುಗಳಲ್ಲಿ ಬಹು ಪಾಲು ಕ್ಯೂಬಿಸಂನಿಂದ ಪ್ರೇರಿತವಾದಂತೆ ಅನುಭವವಾಗುತ್ತವೆ. ಇವುಗಳಲ್ಲಿ ಪ್ರಾಯಶಃ ಕಲ್ಪನೆಯ ಒಂದು ಭಾಗವಿದ್ದಲ್ಲಿ. ಮಾಧ್ಯಮದ ಗುಣ ಮತ್ತು ಧರ್ಮವೂ ಸೇರಿ ಈ ರೀತಿಯ ಆಕೃತಿಗಳು ನಿರ್ಮಿತವಾಗಿವೆ ಎನ್ನಬಹುದು. ಅವುಗಳಲ್ಲಿ ಮುಖವಾಡಗಳದೇ ಒಂದು ವರ್ಗವಿದೆ. ಇವುಗಳನ್ನು ನೋಡುವಾಗ, ನಮಗೆ ಕರಾವಳಿ ಪ್ರದೇಶದ ನೆನಪಾಗುವುದು ಸಹಜ ಅವರು ಹುಟ್ಟಿ ಬೆಳೆದ ಪರಿಸರ, ಅಲ್ಲಿನ ವರ್ಣಮಯ ಸಂಸ್ಕೃತಿ, ಸಾಮಾಜಿಕ ಮತ್ತು ಧಾರ್ಮಿಕ ವಿಧಿಗಳ ಸಂದರ್ಭದಲ್ಲಿ ಧರಿಸುತ್ತಿದ್ದ ಬಗೆ ಬಗೆ ಆಕಾರದ ವಸ್ತುಗಳು ಮುಂತಾದವುಗಳ ಪ್ರಭಾವ ಅವರಲ್ಲಿ ಎಷ್ಟು ವ್ಯಾಪಕವಾಗಿತ್ತು. ಕಾರ್ಯ ಪ್ರಚೋದಕವಾಗಿತ್ತು ಎನಿಸದಿರದು. ಅಂಚನ್‌ರವರು ತಮ್ಮ ಎಪ್ಪತ್ತನೇ ವಯಸ್ಸಿನಲ್ಲಿ ನಿಧನರಾದರು.



ತಿಪ್ಪಾಜಿ



ಶಿಕಾರಿಪುರದ ತಿಪ್ಪಾಜಿ



ಅಜ್ಜಿಹಳ್ಳಿ ನಾಗೇಂದ್ರಾಚಾರ್ಯ



ಎ. ರುದ್ರಾಚಾರ್ಯ

